**ಸರ್ಕಾರಿ ಆದೇಶ ಸಂಖ್ಯೆ ಇಡಿ : 76 : ಯೋಯೋಕ 2009[ಭಾಗ–2], ದಿನಾಂಕ: 15–06–2009**

**[ಇಡಿ: 76 :ಸ್ವೀಮರ(ಯುನಿಕ್)2009, ದಿನಾಂಕ: 15–06–2009] ಕ್ಕೆ ಅನುಬಂಧ**

**ಲೋಕ ಶಿಕ್ಷಣ ಇಲಾಖೆ.:–**

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಆಯವ್ಯಯ ಲೆಕ್ಕಶೀರ್ಷಿಕೆ ಮತ್ತು ಕಾರ್ಯಕ್ರಮದ ಹೆಸರು | 2009–10ನೇ ಸಾಲಿಗೆ ಒದಗಿಸಲಾದ ಅನುದಾನ | ಬಿಡುಗಡೆ ಮಾಡಿರುವ ಎರಡನೇ ತ್ರೈಮಾಸಿಕ ಅನುದಾನ |
|---|---|---|---|
| 1 | ರಾಜ್ಯ ಮಟ್ಟದಲ್ಲಿ ಆಡಳಿತ ರಚನಾತ್ಮಕ ಬಲವರ್ಧನೆ [2202–04–001–0–01] | ರೂ.50.00ಲಕ್ಷ [ಐವತ್ತು ಲಕ್ಷ ರೂಪಾಯಿಗಳು ಮಾತ್ರ] | 12.5 |
| 2 | ರಾಜ್ಯ ಮಟ್ಟದ ಸಾಕ್ಷರತಾ ಕಾರ್ಯಕ್ರಮ ವಿದ್ಯಾರ್ಥಿಗಳ ಮೂಲಕ ಸಾಕ್ಷರತಾ ಕಾರ್ಯಕ್ರಮ[2202–04–001–0–02–059] | 2202–04–001–0–02–059– 150.00 ಲಕ್ಷರೂಗಳು<br>422 – 100.00 ಲಕ್ಷರೂಗಳು<br>423 – 50.00 ಲಕ್ಷರೂಗಳು | 37.50<br>25.00<br>12.50 |
| 3 | ಶಿಕ್ಷಣ ಕೇಂದ್ರಗಳ ಮುಂದುವರಿಕೆ [2202–04–001–0–03–059] | 2202–04–001–0–03–059– ರೂ.150.00 ಲಕ್ಷ<br>422 – ರೂ.100.00ಲಕ್ಷ,<br>423 – ರೂ.50.00 ಲಕ್ಷ | 37.50<br>25.00<br>12.50 |
| 4 | ಪಿಆರ್ಐ ಯೋಜನೆಗಳು[2202–04–001–0–04–059] | ರೂ.500.00ಲಕ್ಷ[ಐದುನೂರುಲಕ್ಷ ರೂಪಾಯಿಗಳುಮಾತ್ರ] | 125.00 |
| 5 | ವಿಸರ್ಜಿತ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ [2202–04–101–0–01] | ರೂ.50.00ಲಕ್ಷ [ಐವತ್ತುಲಕ್ಷರೂಪಾಯಿಗಳು ಮಾತ್ರ] | 12.50 |

**ಸಾರ್ವಜನಿಕ ಗ್ರಂಥಾಲಯ ಇಲಾಖೆ.:–**

ರೂ.ಲಕ್ಷಗಳಲ್ಲಿ

| ಕ್ರ. ಸಂ | ಆಯವ್ಯಯ ಲೆಕ್ಕಶೀರ್ಷಿಕೆ ಮತ್ತು ಕಾರ್ಯಕ್ರಮದ ಹೆಸರು | 2009–10ನೇ ಸಾಲಿಗೆ ಒದಗಿಸಲಾದ ಅನುದಾನ | ಬಿಡುಗಡೆ ಮಾಡಿರುವ ಎರಡನೇ ತ್ರೈಮಾಸಿಕ ಅನುದಾನ |
|---|---|---|---|
| 1 | ರಾಜ್ಯ ಕೇಂದ್ರ ಗ್ರಂಥಾಲಯ 2205–00–105–0–01–059 | ರೂ.300.00ಲಕ್ಷ[ಮುನ್ನೂರುಲಕ್ಷ ರೂಪಾಯಿಗಳುಮಾತ್ರ] | 75.00 |
| 2 | ಜಿಲ್ಲಾ ಗ್ರಂಥಾಲಯ ಪ್ರಾಧಿಕಾರಗಳು [2205–00–105–0–04] | 2205–00–105–0–04–422 – ರೂ.143.00ಲಕ್ಷ<br>2205–00–105–0–04–423 – ರೂ.55.50ಲಕ್ಷ | 35.75<br>13.88 |
| 3 | ಗ್ರಂಥಾಲಯಗಳಿಗೆ ಬೆಂಬಲ [2205–00–105–0–15] | ರೂ.200.00ಲಕ್ಷ [ಎರಡು ನೂರು ಲಕ್ಷ ರೂಪಾಯಿಗಳು ಮಾತ್ರ] | 50.00 |
| | | | |

**ಸರ್ಕಾರಿ ಮುದ್ರಣಾಲಯ ಇಲಾಖೆ.:–**

ರೂ.ಲಕ್ಷಗಳಲ್ಲಿ

| ಕ್ರ. ಸಂ | ಆಯವ್ಯಯ ಲೆಕ್ಕಶೀರ್ಷಿಕೆ ಮತ್ತು ಕಾರ್ಯಕ್ರಮದ ಹೆಸರು | 2009–10ನೇ ಸಾಲಿಗೆ ಒದಗಿಸಲಾದ ಅನುದಾನ | ಬಿಡುಗಡೆ ಮಾಡಿರುವ ಎರಡನೇ ತ್ರೈಮಾಸಿಕ ಅನುದಾನ |
|---|---|---|---|
| 1 | ಸರ್ಕಾರಿ ಮುದ್ರಣಾಲಯಗಳು [2058–00–103–0–01–180] | ರೂ.130.00ಲಕ್ಷ[ನೂರಾಮೂವತ್ತು ಲಕ್ಷರೂಪಾಯಿಗಳುಮಾತ್ರ] | 32.50 |

ರೂ.ಲಕ್ಷಗಳಲ್ಲಿ

| ಕ್ರ ಸಂ | ಆಯವ್ಯಯ ಲೆಕ್ಕಶೀರ್ಷಿಕೆ ಮತ್ತು ಕಾರ್ಯಕ್ರಮದ ಹೆಸರು | 2009–10ನೇ ಸಾಲಿಗೆ ಒದಗಿಸಲಾದ ಅನುದಾನ | ಬಿಡುಗಡೆ ಮಾಡಿರುವ ಎರಡನೇ ತ್ರೈಮಾಸಿಕ ಅನುದಾನ |
|---|---|---|---|
| 2 | ಕರ್ನಾಟಕ ಪಠ್ಯ ಪುಸ್ತಕ ಸಂಘ [2058–00–103–0–09–101] | ರೂ.920.00ಲಕ್ಷ [ಒಂಭೈನೂರಾಇಪ್ಪತ್ತುಲಕ್ಷ ರೂಪಾಯಿಗಳುಮಾತ್ರ] | 230.00 |

**ಐ.ಎಫ್. ಮಾಗಿ**

ಪಿ.ಆರ್. 1489 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ[ಯೋಜನೆ]

**ವಿಷಯ:** 2009–10 ನೇ ಸಾಲಿನಲ್ಲಿ ಹೊಸ ಸರ್ಕಾರಿ ಪಾಲಿಟೆಕ್ನಿಕ್‌ಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:** (1) ದಿನಾಂಕ 27–11–2008 ರಂದು ನಡೆದ ಸಚಿವ ಸಂಪುಟ ಉಪ ಸಮಿತಿಯ ನಿರ್ಣಯ

(2) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ : ಡಿಟಿಇ 39 ಡಿವಿಪಿ 2008 ದಿನಾಂಕ 22–12–2008

(3) ಎ.ಐ.ಸಿ.ಟಿ.ಇ. ಪತ್ರ ಸಂಖ್ಯೆ :12–7/INDIP/SWRO/2009–10 ಡಿವಿಪಿ ದಿನಾಂಕ 01.06.2009

**ಪ್ರಸ್ತಾವನೆ:**

ಓದಲಾದ (1) ದಿನಾಂಕ 27.11.2008 ರಂದು ನಡೆದ ಸಚಿವ ಸಂಪುಟದ ಉಪ ಸಮಿತಿ ಸಭೆಯು 2009–10 ರ ಸಾಲಿನಿಂದ ರಾಜ್ಯದಲ್ಲಿ 22 ಪಾಲಿಟೆಕ್ನಿಕ್ ಕಾಲೇಜುಗಳನ್ನು ಈ ಕೆಳಕಂಡ ಸ್ಥಳಗಳಲ್ಲಿ ಪ್ರಾರಂಭಿಸಲು ಶಿಫಾರಸು ಮಾಡಿದೆ.

| ಕ್ರಮ ಸಂಖ್ಯೆ | ಹೆಸರು | ಜಿಲ್ಲೆ | ಕ್ರಮ ಸಂಖ್ಯೆ | ಹೆಸರು | ಜಿಲ್ಲೆ |
|---|---|---|---|---|---|
| 01 | ಮುಧೋಳ | ಬಾಗಲಕೋಟೆ | 12 | ಇಮ್ಮಡಿಹಳ್ಳಿ | ಬೆಂಗಳೂರು ನಗರ |
| 02 | ಕಾರಟಗಿ ಗಂಗಾವತಿ ತಾ | ಕೊಪ್ಪಳ | 13 | ಝಳಕಿ | ಬಿಜಾಪುರ |
| 03 | ಕಾಳಗಿ | ಗುಲ್ಬರ್ಗಾ | 14 | ಸಿದ್ದಾಪುರ | ಉತ್ತರ ಕನ್ನಡ |
| 04 | ಮುಂಡಗೋಡ | ಉತ್ತರ ಕನ್ನಡ | 15 | ರಬಕವಿ ಬನಹಟ್ಟಿ | ಬಾಗಲಕೋಟೆ |
| 05 | ಹೊಸದುರ್ಗ | ಚಿತ್ರದುರ್ಗ | 16 | ಅಥಣಿ | ಬೆಳಗಾಂ |
| 06 | ಕೆ.ಜಿ.ಎಫ್ | ಕೋಲಾರ | 17 | ಸುರಪುರ | ಗುಲ್ಬರ್ಗಾ |
| 07 | ಹರಿಹರ | ದಾವಣಗೆರೆ | 18 | ಔರದ್ | ಬೀದರ್ |
| 08 | ಹುಬ್ಬಳ್ಳಿ | ಧಾರವಾಡ | 19 | ಹಿರಿಯೂರು | ಚಿತ್ರದುರ್ಗ |
| 09 | ಕಂಪ್ಲಿ | ಬಳ್ಳಾರಿ | 20 | ಚನ್ನಸಂದ್ರ | ಬೆಂ. ನಗರ |
| 10 | ಹರಪನಹಳ್ಳಿ | ದಾವಣಗೆರೆ | 21 | ದೇವದುರ್ಗ | ರಾಯಚೂರು |
| 11 | ಕೂಡ್ಲಿಗಿ | ಬಳ್ಳಾರಿ | 22 | ಬಂಕಾಪುರ | ಹಾವೇರಿ |

ಮೇಲೆ (2) ರಲ್ಲಿ ಓದಲಾದ ದಿನಾಂಕ 22.12.2008ರ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು 2009–10 ನೇ ಸಾಲಿನಲ್ಲಿ 22 ಹೊಸ ಸರ್ಕಾರಿ ಪಾಲಿಟೆಕ್ನಿಕ್ ಗಳನ್ನು ಪ್ರಾರಂಭಿಸಲು ಬೇಕಾಗಬಹುದಾದ ಆವರ್ತ ಮತ್ತು ಅನಾವರ್ತ ವೆಚ್ಚಗಳಿಗೆ ಅನುಮೋದನೆ ಕೋರುತ್ತಾ, ಪ್ರಸ್ತಾಪಿಸಿರುವ 22 ಪಾಲಿಟೆಕ್ನಿಕ್‌ಗಳಲ್ಲಿ ತಲಾ 04 ಡಿಪ್ಲೋಮಾ ಕೋರ್ಸುಗಳನ್ನು ಪ್ರಾರಂಭ ಮಾಡಲಾಗುವುದೆಂದು ತಿಳಿಸಿರುವರು.

1) ಎಲೆಕ್ಟ್ರಾನಿಕ್ಸ್ ಅಂಡ್ ಕಮ್ಯೂನಿಕೇಷನ್ – 60
2) ಮೆಕ್ಯಾನಿಕಲ್ ಇಂಜಿನಿಯರಿಂಗ್ – 60
3) ಸಿವಿಲ್ ಇಂಜಿನಿಯರಿಂಗ್ – 60
4) ಕಂಪ್ಯೂಟರ್ ಸೈನ್ಸ್ – 60

ಈ ಪ್ರಸ್ತಾವನೆ ಕುರಿತು ಸಚಿವ ಸಂಪುಟವು ದಿನಾಂಕ 18–06–2009 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಈ ಪ್ರಸ್ತಾವನೆಗೆ ಅನುಮೋದನೆ ನೀಡಿದೆ.

ಮೇಲೆ ಓದಲಾದ (3)ರ ದಿನಾಂಕ 01.06.2009 ರ ಪತ್ರದಲ್ಲಿ ಎ.ಐ.ಸಿ.ಟಿ.ಇ. ಒಪ್ಪಿಗೆ ನೀಡಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 191 ಯೋಯೋಕ 2008, ಬೆಂಗಳೂರು, ದಿನಾಂಕ: 29ನೇ ಜೂನ್ 2009**

ರಾಜ್ಯದಲ್ಲಿ ಈ ಕೆಳಕಂಡ 22 ಸ್ಥಳಗಳಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜುಗಳನ್ನು ಪ್ರಾರಂಭಿಸಲು ಸರ್ಕಾರ ತಾತ್ವಿಕ ಅನುಮೋದನೆ ನೀಡಿ, ಪ್ರಸ್ತುತ ಸಾಲಿನಲ್ಲಿ ಯಾವ ಯಾವ ಸರ್ಕಾರಿ ಕಾಲೇಜುಗಳಲ್ಲಿ ಸ್ಥಾಪಿಸಲು ಸ್ಥಳಾವಕಾಶವಿದೆಯೋ ಅಂತಹ ಸ್ಥಳಗಳಲ್ಲಿ ಪ್ರಾರಂಭಿಸಲು, ಹಾಗೂ ಉಳಿದ ಸ್ಥಳಗಳಲ್ಲಿ ಸ್ಥಳಾವಕಾಶ ದೊರೆತ ನಂತರ ಸರ್ಕಾರದ ಅನುಮತಿಯನ್ನು ಪಡೆದು ಪ್ರಾರಂಭಿಸಬೇಕೆಂಬ ಷರತ್ತನ್ನು ವಿಧಿಸಿ ಅನುಮೋದನೆ ನೀಡಿದೆ.

1. ಮುಧೋಳ
2. ಕಾರಟಗಿ
3. ಕಾಳಗಿ
4. ಮುಂಡಗೋಡ
5. ಹೊಸದುರ್ಗ
6. ಕೆ.ಜಿ.ಎಫ್.
7. ಹರಿಹರ
8. ಹುಬ್ಬಳ್ಳಿ
9. ಕಂಪ್ಲಿ
10. ಹರಪನಹಳ್ಳಿ
11. ಕೂಡ್ಲಿಗಿ
12. ಇಮ್ಮಡಿಹಳ್ಳಿ
13. ಝಳಕಿ
14. ಸಿದ್ದಾಪುರ
15. ರಬಕವಿ–ಬನಹಟ್ಟಿ
16. ಅಥಣಿ
17. ಸುರಪುರ
18. ಔರಾದ್
19. ಹಿರಿಯೂರು
20. ಚನ್ನಸಂದ್ರ
21. ದೇವದುರ್ಗ
22. ಬಂಕಾಪುರ

**ಷರತ್ತುಗಳು :**

1. ಪ್ರತಿ ಹೊಸ ಪಾಲಿಟೆಕ್ನಿಕ್‌ನಲ್ಲಿ ಈ ಕೆಳಕಂಡ ಕೋರ್ಸುಗಳನ್ನು ಪ್ರಾರಂಭಿಸತಕ್ಕದ್ದು.
   - ಎಲೆಕ್ಟ್ರಾನಿಕ್ ಅಂಡ್ ಕಮ್ಯೂನಿಕೇಷನ್ ಇಂಜಿನಿಯರಿಂಗ್
   - ಮೆಕ್ಯಾನಿಕಲ್ ಇಂಜಿನಿಯರಿಂಗ್
   - ಸಿವಿಲ್ ಇಂಜಿನಿಯರಿಂಗ್
   - ಕಂಪ್ಯೂಟರ್ ಇಂಜಿನಿಯರಿಂಗ್
2. ಪ್ರತಿ ಕೋರ್ಸುಗಳಲ್ಲಿ ಕನಿಷ್ಟ 60 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸತಕ್ಕದ್ದು.
3. ಸದರಿ ಕೋರ್ಸುಗಳಲ್ಲಿ ಪ್ರವೇಶ ಪಡೆಯಲು ವಿದ್ಯಾರ್ಥಿಗಳು ಕನಿಷ್ಠ ಎಸ್.ಎಸ್.ಎಲ್.ಸಿ. ಅಥವಾ ಇತರೆ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು. ವಿಜ್ಞಾನ ಹಾಗೂ ಗಣಿತ, ಪ್ರತಿ ವಿಷಯದಲ್ಲಿ ಶೇಕಡಾ 35 ಕ್ಕಿಂತ ಕಡಿಮೆ ಇರದಂತೆ ಅಂಕಗಳನ್ನು ಗಳಿಸಿರಬೇಕು.
4. ವಿದ್ಯಾರ್ಥಿಗಳ ಪ್ರವೇಶಕ್ಕೆ ಸರ್ಕಾರವು ಆಗ್ಗಿಂದ್ದಾಗ್ಗೆ ಹೊರಡಿಸುವ ಆದೇಶಕ್ಕೆ ಅನುಗುಣವಾಗಿ ಮೀಸಲಾತಿಯನ್ನು ನೀಡಲಾಗುತ್ತದೆ.
5. ಸದರಿ ಕೋರ್ಸ್‌ಗಳ ಅವಧಿಯು 6 ಸೆಮಿಸ್ಟರ್‌ಗಳನ್ನು ಒಳಗೊಂಡಂತೆ ಮೂರು ವರ್ಷಗಳ ಅವಧಿಯದಾಗಿರುತ್ತದೆ.
6. ಈ ಕೋರ್ಸುಗಳಿಗೆ ತಾಂತ್ರಿಕ ಪರೀಕ್ಷಾ ಮಂಡಳಿಯವರು ರೂಪಿಸಿರುವ ಪಠ್ಯ ಕ್ರಮ ಹಾಗೂ ಪಾಠ ಪ್ರಣಾಳಿಕೆಯನ್ನು ಅಳವಡಿಸಿ, ಸೆಮಿಸ್ಟರ್ ಪದ್ಧತಿಯ ಅನುಸಾರ ಪರೀಕ್ಷೆಗಳನ್ನು ನಡೆಸತಕ್ಕದ್ದು.
7. 2009–10 ನೇ ಶೈಕ್ಷಣಿಕ ವರ್ಷದಿಂದಲೇ ಕೋರ್ಸುಗಳನ್ನು ಪ್ರಾರಂಭಿಸಲು ಸಂಬಂಧಿಸಿದ ಸ್ಥಳಗಳಲ್ಲಿಯೇ ಲಭ್ಯವಿರುವ ಸರ್ಕಾರಿ ಕಟ್ಟಡಗಳಲ್ಲಿ ಪ್ರಾರಂಭಿಸತಕ್ಕದ್ದು.
8. ಪ್ರತಿ ಕೋರ್ಸುಗಳಿಗೆ ಪುಸ್ತಕ ಖರೀದಿಗಾಗಿ ಬೇಕಾಗುವ 2.00 ಲಕ್ಷ ರೂ.ಗಳನ್ನು ಕಾರ್ಯಾಗಾರ, ಪ್ರಯೋಗಾಲಯಗಳಿಗಾಗಿ ಮತ್ತು ವಿದ್ಯಾರ್ಥಿ/ಸಿಬ್ಬಂದಿಗಳ ಆಸನ ವ್ಯವಸ್ಥೆಗಾಗಿ 08.00 ಲಕ್ಷ ರೂ.ಗಳನ್ನು ಯಂತ್ರೋಪಕರಣಗಳ ಖರೀದಿಗಾಗಿ ರೂ. 50.00 ಲಕ್ಷಗಳನ್ನು 2009–10ನೇ ಸಾಲಿಗೆ ಒದಗಿಸಿರುವ ಅನುದಾನದ ಮಿತಿಯೊಳಗೇ ಭರಿಸತಕ್ಕದ್ದು. ಈ ಉದ್ದೇಶಕ್ಕಾಗಿ ಹೆಚ್ಚುವರಿ ಆಯವ್ಯಯವನ್ನು ಪೂರಕ ಅಂದಾಜಿನಲ್ಲಿ ಒದಗಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
9. ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ಈ ಕೆಳಕಂಡಂತೆ ಸೃಜಿಸಲು ಅನುಮತಿ ನೀಡಲಾಗಿದೆ.

| ಬೋಧಕರು | ಎಲೆಕ್ಟ್ರಾನಿಕ್ಸ್ ಅಂಡ್ ಕಮ್ಯೂನಿಕೇಷನ್ | ಮೆಕ್ಯಾನಿಕಲ್ ಇಂಜಿನಿಯರಿಂಗ್ | ಸಿವಿಲ್ ಇಂಜಿನಿಯರಿಂಗ್ | ಕಂಪ್ಯೂಟರ್ ಇಂಜಿನಿಯರಿಂಗ್ | **ಒಟ್ಟು** |
|---|---|---|---|---|---|
| ಉಪನ್ಯಾಸಕರು | 7 | 8 | 7 | 6+1 (ವಿದ್ಯುತ್ ಉಪನ್ಯಾಸಕರು) +2 (ವಿಜ್ಞಾನ ಉಪನ್ಯಾಸಕರು) | **31** |
| ಸಿಸ್ಟಂ ಅನಾಲಿಸ್ಟ್ | – | – | – | 1 | **1** |
| ಬೋಧಕರು/ಆಪರೇಟರ್ | 1 | 1 | 1 | 1 | **4** |
| ಸಹಾಯಕ ಬೋಧಕರು | 1 | 2 | 2 | – | **5** |
| ಮೆಕ್ಯಾನಿಕ್ಸ್ | 2 | 2 | 2 | 2 | **8** |
| ಹೆಲ್ಪರ್ | 5 | 3 | 3 | 2 | **13** |
| **ಆಡಳಿತ ಸಿಬ್ಬಂದಿ** | | | | | |
| ಪ್ರಾಂಶುಪಾಲರು | 1 | – | – | – | **1** |
| ರಿಜಿಸ್ಟ್ರಾರ್ | 1 | – | – | – | **1** |
| ಕಛೇರಿ ಅಧೀಕ್ಷಕರು | 3 | – | – | – | **3** |
| ಪ್ರಥಮ ದರ್ಜೆ ಸಹಾಯಕರು | 4 | – | – | – | **4** |
| ದ್ವಿತಿಯ ದರ್ಜೆ ಸಹಾಯಕರು | 5 | – | – | – | **5** |
| ಬೆರಳಚ್ಚುಗಾರರು | 1 | – | – | – | **1** |
| ಕಛೇರಿ ಸಹಾಯಕರು | 1 | – | – | – | **1** |
| ಗ್ರೂಪ್ ಡಿ | 8 | – | – | – | **8** |

ಬೋಧಕೇತರ ಸಿಬ್ಬಂದಿಯಲ್ಲಿ ಶೇ. 50 ರಷ್ಟನ್ನು ಮಾತ್ರ ಭರ್ತಿ ಮಾಡಲು ಅನುಮತಿ ನೀಡಿದೆ. ಪ್ರಥಮ ಹಂತದಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ಸರ್ಕಾರಿ ಹಾಗೂ ಖಾಸಗಿ ಪಾಲಿಟೆಕ್ನಿಕ್ ಕಾಲೇಜುಗಳಿಂದ ಎರವಲು ಪಡೆಯುವುದು.

10. ಆಗ್ಗಿಂದಾಗ್ಗೆ ಸರ್ಕಾರವು ನಿಗದಿಪಡಿಸುವ ಶುಲ್ಕಗಳು ಅನ್ವಯವಾಗುತ್ತವೆ.
11. ಈ ಕೋರ್ಸ್‌ನಲ್ಲಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳು ಸರ್ಕಾರದ ಆದೇಶಾನುಸಾರ ವಿದ್ಯಾರ್ಥಿ ವೇತನಕ್ಕೆ ಮತ್ತು ಶುಲ್ಕ ವಿನಾಯತಿಗೆ ಅರ್ಹರಾಗಿರುತ್ತಾರೆ.
12. ಅನಾವರ್ತ ವೆಚ್ಚ ಈ ಕೆಳಕಂಡಂತೆ ಭರಿಸತಕ್ಕದ್ದು.

ರೂ. ಲಕ್ಷಗಳಲ್ಲಿ

| ಕ್ರ. ಸಂ | ಖರ್ಚಿನ ವಿವರ | 1ನೇ ವರ್ಷ | 2ನೇ ವರ್ಷ | 3ನೇ ವರ್ಷ |
|---|---|---|---|---|
| 01 | ಪೀಠೋಪಕರಣಗಳ ಖರೀದಿ | 8.00 | 6.00 | 6.00 |
| 02 | ಪುಸ್ತಕಗಳ ಖರೀದಿ | 2.00 | 1.50 | 1.50 |
| 03 | ಯಂತ್ರೋಪಕರಣಗಳ ಖರೀದಿ | 70.00 | 50.00 | 30.00 |
| | **ಒಟ್ಟು** | **80.00** | **57.50** | **37.50** |

13. ಆವರ್ತ ವೆಚ್ಚವನ್ನು ಈ ಕೆಳಕಂಡಂತೆ ಭರಿಸತಕ್ಕದ್ದು.

ರೂ. ಲಕ್ಷಗಳಲ್ಲಿ

| ಕ್ರ. ಸಂ | ಖರ್ಚಿನ ವಿವರ | 1ನೇ ವರ್ಷ | 2ನೇ ವರ್ಷ | 3ನೇ ವರ್ಷ |
|---|---|---|---|---|
| 01 | ಸಿಬ್ಬಂದಿ ವೇತನ | 56.16 | 96.48 | 123.84 |
| 02 | ನಿತ್ಯೋಪಯೋಗಿ ಸಾಮಗ್ರಿಗಳ ವೆಚ್ಚ | 0.50 | 1.30 | 0.75 |
| 03 | ಇತರೆ ವೆಚ್ಚಗಳು | 0.25 | 0.45 | 0.75 |
| | **ಒಟ್ಟು** | **56.91** | **98.23** | **126.59** |

14. ಸಿಬ್ಬಂದಿ ನೇಮಕಾತಿ ವಿವರಗಳನ್ನು ವರ್ಷಾವಾರು ಈ ಕೆಳಕಂಡಂತೆ ಮಾಡತಕ್ಕದ್ದು.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | 1ನೇ ವರ್ಷ | 2ನೇ ವರ್ಷ | 3ನೇ ವರ್ಷ |
|---|---|---|---|---|---|
| 01 | ಪ್ರಾಂಶುಪಾಲರು | 1 | 1 | – | – |
| 02 | ಉಪನ್ಯಾಸಕರು | 31 | 14 | 10 | 7 |
| 03 | ಸಿಸ್ಟಂ ಅನಾಲಿಸ್ಟ್ | 1 | 1 | – | – |
| 04 | ಬೋಧಕರು/ಆಪರೇಟರ್ | 4 | 1 | 1 | 2 |
| 05 | ಸಹಾಯಕ ಬೋಧಕರು | 5 | 2 | 2 | 1 |
| 06 | ಮೆಕ್ಯಾನಿಕ್ಸ್ | 8 | 3 | 3 | 2 |
| 07 | ಹೆಲ್ಪರ್ | 13 | 5 | 3 | 5 |
| 08 | ರಿಜಿಸ್ಟ್ರಾರ್ | 1 | 1 | – | – |
| 09 | ಕಛೇರಿ ಅಧೀಕ್ಷಕರು | 3 | 1 | 1 | 1 |
| 10 | ಪ್ರಥಮ ದರ್ಜೆ ಸಹಾಯಕರು | 4 | 2 | 2 | – |
| 11 | ದ್ವಿತಿಯ ದರ್ಜೆ ಸಹಾಯಕರು | 5 | 2 | 2 | 1 |
| 12 | ಬೆರಳಚ್ಚುಗಾರರು | 1 | 1 | – | – |
| 13 | ಕಛೇರಿ ಸಹಾಯಕರು | 1 | 1 | – | – |
| 14 | ಗ್ರೂಪ್ ಡಿ | 8 | 4 | 4 | – |
| ಒಟ್ಟು | | **86** | **39** | **28** | **19** |

15. ಕೋರ್ಸುಗಳಿಗೆ ತಗಲುವ ಅನಾವರ್ತ ಮತ್ತು ಆವರ್ತ ವೆಚ್ಚವನ್ನು ಲೆಕ್ಕಶೀರ್ಷಿಕೆ "2203–00–105–0–01 ಸರ್ಕಾರಿ ಪಾಲಿಟೆಕ್ನಿಕ್‌ಗಳು ಯೋಜನೆಯಡಿ ಯಲ್ಲಿ ಒದಗಿಸುವ ಮೊತ್ತದಲ್ಲಿಯೇ ಭರಿಸತಕ್ಕದ್ದು.

16. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 755 ವೆಚ್ಚ–8/2009 ರ ದಿನಾಂಕ 11.06.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1492 **ಎಸ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ ಶಿಕ್ಷಣ ಇಲಾಖೆ

**ವಿಷಯ:** 2009–10ನೇ ಸಾಲಿನಿಂದ ಹಾಗೂ ನಂತರ ಅನ್ವಯಿಸುವಂತೆ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪದವಿ ಕಾಲೇಜು / ಕಛೇರಿಗಳ ಅಧಿಕಾರಿಗಳ ಬೋಧಕ ಹಾಗೂ ಬೋಧಕೇತರ ವರ್ಗಾವಣೆ, ನೇರ ನೇಮಕಾತಿ ಹಾಗೂ ಬಡ್ತಿಯಿಂದ ಸ್ಥಳನಿಯುಕ್ತಿಗೊಳಿಸುವಿಕೆಯನ್ನು ಕೌನ್ಸಿಲಿಂಗ್ ಮೂಲಕ ಮಾಡುವ ಬಗ್ಗೆ ಅದೇಶ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್–4–ಎಸ್‌ಟಿಆರ್–2001 ದಿನಾಂಕ; 22–11–2001
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 44 ಡಿಸಿಇ 2002 ದಿನಾಂಕ: 12–04–2002
3. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಆ:24: ಟಿಆರ್‌ಸಿ: 2007 ಸಿವಿ1 ದಿನಾಂಕ:25.05.2009 ಮತ್ತು 27–05–2009

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಆಯುಕ್ತರು ಮೇಲೆ 03ರಲ್ಲಿ ಓದಲಾದ ದಿನಾಂಕ: 25–05–2009 ಮತ್ತು 27–05–2009ರ ಅವರ ಪತ್ರಗಳಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಗೊಳಪಡುವ ಸರ್ಕಾರಿ ಪದವಿ ಕಾಲೇಜುಗಳ ಹಾಗೂ ಕೇಂದ್ರ ಮತ್ತು ಪ್ರಾದೇಶಿಕ ಜಂಟಿ ನಿರ್ದೇಶಕರ ಕಛೇರಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಹಾಗೂ ಬೋಧಕೇತರರ ವರ್ಗಾವಣೆಗಳನ್ನು 2009–10ನೇ ಸಾಲಿನ ಹಾಗೂ ನಂತರದ ಸಾರ್ವತ್ರಿಕ ವರ್ಗಾವಣೆಗಳನ್ನು ಕೌನ್ಸಿಲಿಂಗ್ ಮೂಲಕವೇ ಮಾಡಬೇಕಾಗಿರುವುದರಿಂದ ಮಾರ್ಗಸೂಚಿಗಳನ್ನು ರಚಿಸಿ ಸರ್ಕಾರಿ ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ. ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಮಾಡುವುದರಿಂದ ವರ್ಗಾವಣೆ ಪ್ರಕ್ರಿಯೆಯು ಪಾರದರ್ಶಕವಾಗಿರುತ್ತದೆ. ಇದಲ್ಲದೆ ಕೌನ್ಸಿಲಿಂಗ್ ಪ್ರಕ್ರಿಯೆಯಿಂದ ನೌಕರರು ತಮ್ಮ ವರ್ಗಾವಣೆಗಾಗಿ ಒತ್ತಡಗಳನ್ನು ತರುವುದು, ಕಾಲೇಜು/ಕಛೇರಿ ಬಿಟ್ಟು ಅಲೆದಾಡುವುದು, ಮಧ್ಯವರ್ತಿಗಳನ್ನು ಸಂಪರ್ಕಿಸುವುದು, ಮತ್ತಿತರ ಲೋಪದೋಷಗಳನ್ನು ತಡೆಯಲು ಸಾಧ್ಯವಾಗುತ್ತದೆ. ಈ

ಹಿನ್ನಲೆಯಲ್ಲಿ ಸದರಿ ವಿಷಯದ ಕುರಿತು ಸರ್ಕಾರ ಕೌನ್ಸಿಲಿಂಗ್ ಮೂಲಕ ಬೋಧಕ ಹಾಗೂ ಬೋಧಕೇತರರ ವರ್ಗಾವಣೆ ಮಾಡಲು ಸಾಮಾನ್ಯ ಸೂಚನೆಗಳು ಹಾಗೂ ವಿಧಾನಗಳನ್ನು ರಚಿಸುವಂತೆ ಕಾಲೇಜು ಶಿಕ್ಷಣ ಆಯುಕ್ತರು ಕೋರಿರುತ್ತಾರೆ.

ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 178 ಡಿಸಿಇ 2009, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿರುವ ಸರ್ಕಾರಿ ಪದವಿ ಕಾಲೇಜುಗಳ ಹಾಗೂ ಕೇಂದ್ರ ಮತ್ತು ಪ್ರಾದೇಶಿಕ ಜಂಟಿ ನಿರ್ದೇಶಕರ ಕಛೇರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ/ಬೋಧಕೇತರ ವರ್ಗಾವಣೆ / ನೇಮಕಾತಿ ಹಾಗೂ ಬಡ್ತಿಯಿಂದ ಸ್ಥಳನಿಯುಕ್ತಿಗೊಳಿಸುವಿಕೆಯನ್ನು 2009–10ನೇ ಸಾಲಿನಿಂದ ಹಾಗೂ ನಂತರ ಅನ್ವಯಿಸುವಂತೆ ಕೌನ್ಸಿಲಿಂಗ್ ಮೂಲಕ ನಡೆಸಲು ಈ ಕೆಳಕಂಡ ಮಾರ್ಗಸೂಚಿಗಳನ್ನು ನಿಗಧಿಪಡಿಸಲಾಗಿದೆ.

1. ಕೌನ್ಸಿಲಿಂಗ್ ಮೂಲಕ ಬೋಧಕ ಹಾಗೂ ಬೋಧಕೇತರರ ವರ್ಗಾವಣೆ ಮಾಡಲು ಸಾಮಾನ್ಯ ಸೂಚನೆಗಳು ಹಾಗೂ ವಿಧಾನ.

1.1 ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಶೈಕ್ಷಣಿಕ ವರ್ಷ 2009–10 ಹಾಗೂ ಇನ್ನು ಮುಂದೆ ಬೋಧಕ ಹಾಗೂ ಬೋಧಕೇತರರ ವರ್ಗಾವಣೆಗಳನ್ನು ಕೌನ್ಸಿಲಿಂಗ್ ಮೂಲಕವೇ ಮಾಡತಕ್ಕದ್ದು.

1.2 ವರ್ಗಾವಣೆ ನೀತಿಯನ್ವಯ, ಸಾಮಾನ್ಯ ವರ್ಗಾವಣೆಗಳನ್ನು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಸರ್ಕಾರ ನಿರ್ಧರಿಸಿದ್ದರೆ ಮಾತ್ರ ಮಾಡತಕ್ಕದ್ದು, ನಂತರ ವರ್ಗಾವಣೆಗೆ ಅವಕಾಶವಿಲ್ಲ.

1.3 ಪ್ರಾಂಶುಪಾಲರು/ಬೋಧಕ ಹಾಗೂ ಬೋಧಕೇತರರ, ತಾವು ಸೇವೆ ಸಲ್ಲಿಸುವ ಸ್ಥಳಗಳಲ್ಲಿ ಯಾವುದಾದರೂ ಗುರುತರ ದೂರುಗಳು ಬಂದರೇ ಕೂಡಲೇ ಅವರ ವರ್ಗಾವಣೆಯನ್ನು, 0.5% ಗೆ ಮೀರದಂತೆ ವರ್ಗಾವಣೆ ಮಾಡುವ ಅಧಿಕಾರ ವೃಂದ ನಿರ್ವಹಣಾ ಪ್ರಾಧಿಕಾರಕ್ಕಿರುತ್ತದೆ.

1.4 ಅವಧಿಪೂರ್ವ ವಿಶೇಷ ಪ್ರಕರಣಗಳಿಗೆ (ವೈದ್ಯಕೀಯ) ಮೊದಲನೇ ಸುತ್ತಿನಲ್ಲಿ ಕೌನ್ಸಿಲಿಂಗ್‌ಗೆ ಅವಕಾಶ ನೀಡುವುದು ಮತ್ತು ವರ್ಗಾವಣೆ ಅವಧಿಯ ನಂತರದ ಇಂತಹ ವಿಶೇಷ ಪ್ರಕರಣಗಳಲ್ಲಿ ಕೌನ್ಸಿಲಿಂಗ್ ಹೊರತುಪಡಿಸಿ ಸರ್ಕಾರದ ಅನುಮೋದನೆ ಪಡೆದು ವರ್ಗಾವಣೆಯನ್ನು ಸಕ್ಷಮ ಪ್ರಾಧಿಕಾರ ಮಾಡುವುದು.

ಸಾಮಾನ್ಯ ವರ್ಗಾವಣೆಗಳನ್ನು ಸರ್ಕಾರಿ ಅದೇಶ ಸಂಖ್ಯೆ: ಡಿಪಿಎಆರ್:04:ಎಸ್‌ಟಿಆರ್:01 ದಿನಾಂಕ: 22–11–2001 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಡಿ 44 ಡಿಸಿಇ 2002 ದಿನಾಂಕ: 12–04–2002ರಂತೆ ಮಾತ್ರ ಮಾಡಬೇಕು ಮತ್ತು ವೃಂದ ನಿರ್ವಹಣಾ ಪ್ರಾಧಿಕಾರ ಕೆಳಕಂಡಂತಿರುತ್ತದೆ:

**(ಅ)ಗ್ರೂಪ್–ಎ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸರ್ಕಾರಿ ಅಧಿಕಾರಿಗಳ ವರ್ಗಾವಣೆಗೆ ಸಂಬಂಧಿಸಿದಂತೆ "ವೃಂದ ನಿರ್ವಹಣಾ ಪ್ರಾಧಿಕಾರ"**

1. ಮಾನ್ಯ ಉನ್ನತ ಶಿಕ್ಷಣ ಸಚಿವರು – ಅಧ್ಯಕ್ಷರು
2. ಸರ್ಕಾರದ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ(ಉನ್ನತ ಶಿಕ್ಷಣ) – ಸದಸ್ಯರು
3. ಕಾಲೇಜು ಶಿಕ್ಷಣ ಆಯುಕ್ತರು, ಬೆಂಗಳೂರು – ಸದಸ್ಯರು
4. ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ(ಉನ್ನತ ಶಿಕ್ಷಣ) – ಸಂಚಾಲಕರು

**ಆ)ಗ್ರೂಪ್–ಬಿ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ಸರ್ಕಾರಿ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಹಾಗೂ ಗ್ರೂಪ್ ಸಿ ಮತ್ತು ಗ್ರೂಪ್ ಡಿ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರುಗಳ ಜಿಲ್ಲೆಯೊಳಗೆ ಅಥವಾ ಅಂತರ ಜಿಲ್ಲಾ ವರ್ಗಾವಣೆಗೆ ಸಂಬಂಧಿಸಿದಂತೆ "ವೃಂದ ನಿರ್ವಹಣಾ ಪ್ರಾಧಿಕಾರ"**

1. ಕಾಲೇಜು ಶಿಕ್ಷಣ ಆಯುಕ್ತರು, ಬೆಂಗಳೂರು – ಅಧ್ಯಕ್ಷರು
2. ಕಾಲೇಜು ಶಿಕ್ಷಣ ನಿರ್ದೇಶಕರು, ಬೆಂಗಳೂರು – ಸದಸ್ಯರು
3. ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಬೆಂಗಳೂರು – ಸದಸ್ಯರು
4. ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು – ಸಂಚಾಲಕರು

1.5 ಪ್ರತಿ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ಬೋಧಕೇತರ ಸಂಖ್ಯಾ ಬಲದ ಶೇಕಡ 5.0ಕ್ಕಿಂತ ಹೆಚ್ಚು ವರ್ಗಾವಣೆಗಳನ್ನು ಮಾಡಬಾರದು.

1.6 ಎಲ್ಲಾ ಪ್ರಕರಣಗಳಲ್ಲಿ ಖಾಲಿ ಹುದ್ದೆ ಹಾಗೂ ಆಯಾ ವಿಷಯಗಳಲ್ಲಿನ ಕಾರ್ಯಭಾರದ ಆಧಾರದ ಮೇಲೆ ಗಣಕೀಕರಣದ ಮೂಲಕ ವರ್ಗಾವಣೆಯ ಕೌನ್ಸಿಲಿಂಗ್ ಮಾಡಬೇಕು. Weightage ಆಧಾರದ ಮೇಲೆ ಆದ್ಯತೆ ನೀಡುವುದು.

1.7 ಕೌನ್ಸಿಲಿಂಗ್ ಮೂಲಕ ಕೋರಿಕೆ ವರ್ಗಾವಣೆಗಳ ತತ್ಪರಿಣಾಮವಾಗಿ ಉದ್ಭವವಾಗುವ ಖಾಲಿ ಹುದ್ದೆಗಳನ್ನು ಮರು ಕೌನ್ಸಿಲಿಂಗ್‌ಗಳಲ್ಲಿ ತುಂಬುವುದು. ಮತ್ತು ಅಂತಿಮವಾಗಿ ಉಳಿಯುವ ಖಾಲಿ ಹುದ್ದೆಗಳನ್ನು ನೇರ ನೇಮಕಾತಿಯಿಂದ (ಕೆಪಿಎಸ್‌ಸಿ ಆಯ್ಕೆಪಟ್ಟಿ) ಕೌನ್ಸಿಲಿಂಗ್ ಮೂಲಕ ತುಂಬಲು ಕ್ರಮಕೈಗೊಳ್ಳುವುದು.

1.8 ಖಾಲಿ ಇರುವ ಹುದ್ದೆಗಳಿಗೆ ಮಾತ್ರ ವರ್ಗಾವಣೆ ಮಾಡತಕ್ಕದ್ದು. ಈ ಮಾರ್ಗಸೂಚಿಯಲ್ಲಿ ಅವಕಾಶ ಕಲ್ಪಿಸಿರುವಂತೆ ನಗರ ಪ್ರದೇಶದಲ್ಲಿನ ಬೋಧಕರ/ಬೋಧಕೇತರ ವರ್ಗಾವಣೆ ಮಾಡುವ ಪ್ರಕರಣಗಳು ಮತ್ತು ಆಡಳಿತ ಹಿತದೃಷ್ಟಿಯಿಂದ ಹಾಗೂ ಓದಲಾದ (1)ರ ಆದೇಶದಲ್ಲಿ ನಿಗದಿಪಡಿಸಿರುವ ಅವಧಿ ಮುಗಿದಿರುವ ಪ್ರಕರಣಗಳು, ಸ್ವಂತ ಕೋರಿಕೆ, ಪರಸ್ಪರ ವರ್ಗಾವಣೆ ಹೊರತುಪಡಿಸಿ ಉಳಿದಂತೆ ವರ್ಗಾವಣೆ ಮಾಡತಕ್ಕದ್ದಲ್ಲ.

1.9 ಕಾರ್ಯಭಾರದ ಕೊರತೆಯಿಂದಾಗಿ ಹೆಚ್ಚುವರಿ ಖಾಲಿ ಹುದ್ದೆಯನ್ನಾಗಲಿ ಅಥವಾ ಹೆಚ್ಚುವರಿ ಬೋಧಕರನ್ನಾಗಲಿ ಹುದ್ದೆ ಸಮೇತವಾಗಿ ಸಕ್ಷಮ ಪ್ರಾಧಿಕಾರವೇ ಸ್ಥಳಾಂತರಿಸಲು ಅನುಮತಿ ನೀಡಲಾಗಿದೆ. ಈ ಪ್ರಕರಣ ಹೊರತುಪಡಿಸಿ ಯಾವುದೇ ಕಾರಣಕ್ಕೂ ಹುದ್ದೆ ಸ್ಥಳಾಂತರಿಸುವಂತಿಲ್ಲ.

1.10 ನೇರ ನೇಮಕಾತಿ ಹಾಗೂ ಬಡ್ತಿ ನೀಡಿ ಸ್ಥಳನಿಯುಕ್ತಿಗೊಳಿಸುವಾಗ ಖಾಲಿ ಇರುವ ಹುದ್ದೆಗಳಿಗೆ ಎದುರಾಗಿ ಮಾತ್ರ ಸ್ಥಳನಿಯುಕ್ತಿ ಮಾಡತಕ್ಕದ್ದು.

1.11 ಎಲ್ಲಾ ಬೋಧಕರು ಹಾಗೂ ಬೋಧಕೇತರರು ಡಾ: ಡಿ.ಎಂ.ನಂಜುಂಡಪ್ಪ ವರದಿಯಲ್ಲಿ ವರ್ಗೀಕರಿಸಿರುವ ಅತ್ಯಂತ ಹಿಂದುಳಿದ 39 ತಾಲ್ಲೂಕು ವ್ಯಾಪ್ತಿಯಲ್ಲಿ ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದವರಿಗೆ, ಮುಂದಿನ ವರ್ಗಾವಣೆಯಲ್ಲಿ, ಆಭ್ಯರ್ಥಿಯು ಯಾವುದೇ ಸ್ಥಳಗಳನ್ನು ಆಯ್ಕೆ ಮಾಡುವ ಅವಕಾಶ ನೀಡಲಾಗುವುದು.

1.12 ಪ್ರಥಮ ಬಾರಿಗೆ ನೇಮಕವಾಗುವ ಬೋಧಕ ಹಾಗೂ ಬೋಧಕೇತರರು ನೇಮಕವಾಗಿರುವ ವರ್ಗಾವಣೆ ಮಾಡುವಾಗ 'ಎ' ವರ್ಗದ ಕಾಲೇಜುಗಳಲ್ಲಿ 3 ವರ್ಷ, 'ಬಿ' ವರ್ಗದ ಕಾಲೇಜುಗಳಲ್ಲಿ 5 ವರ್ಷ ಮತ್ತು 'ಸಿ' ವರ್ಗದ ಕಾಲೇಜುಗಳಲ್ಲಿ 7 ವರ್ಷಗಳ ಸೇವೆಯ ಕಡ್ಡಾಯವಾಗಿ ಪೂರೈಸತಕ್ಕದ್ದು.

1.13 ಚುನಾಯಿತ ಕರ್ನಾಟಕ ಸರ್ಕಾರಿ ನೌಕರರ ಸಂಘದ ಪದಾಧಿಕಾರಿಗಳಾಗಿದ್ದಲ್ಲಿ ಅವರ ವರ್ಗಾವಣೆ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ: 22–11–2001 ರಲ್ಲಿ ತಿಳಿಸಿರುವಂತೆ ಕ್ರಮಕೈಗೊಳ್ಳುವುದು.

1.14 ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ, ರಾಜ್ಯ ಮಟ್ಟದ ಬೋಧಕ, ಬೋಧಕೇತರ ಸಂಘದ, ಒಕ್ಕೂಟದ ಚುನಾಯಿತ ಪ್ರಾಧಿಕಾರಿಗಳಾಗಿದ್ದಲ್ಲಿ ಇವರುಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ:22.11.01ರ ಕಂಡಿಕೆ 6(3)ರ ಸೌಲಭ್ಯ ನೀಡಬಹುದು. ಆದರೆ, ಒಬ್ಬರು ಎರಡು ಸಂಘಗಳನ್ನು ಸೇರಿ ಸತತವಾಗಿ ಎರಡು ಭಾರಿಗಿಂತ ಹೆಚ್ಚು ಈ ಸೌಲಭ್ಯಕ್ಕೆ ಪಡೆಯುವಂತಿಲ್ಲ.

1.15 ನಗರ ಪ್ರದೇಶದಲ್ಲಿ ಸೇವೆ ಸಲ್ಲಿಸಿರುವ ಬೋಧಕರು, ಗ್ರಾಮಾಂತರ ಪ್ರದೇಶದ ಕಾಲೇಜುಗಳನ್ನು ಮಾತ್ರ ಆರಿಸಿಕೊಳ್ಳಬಹುದು. ಪರಸ್ಪರ ವರ್ಗಾವಣೆಯನ್ನೊಳಗೊಂಡಂತೆ, ನಗರದಿಂದ ನಗರ ಪ್ರದೇಶಕ್ಕೆ ವರ್ಗಾವಣೆಗೆ ಅವಕಾಶವಿಲ್ಲ.

1.16 ಸರ್ಕಾರಿ ಕಾಲೇಜುಗಳಲ್ಲಿ ಎನ್.ಸಿ.ಸಿ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಉಪನ್ಯಾಸಕರು/ದೈಹಿಕ ಬೋಧಕರ ವರ್ಗವಣೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಡಿ 26 ರಾಯುಸೇ 2002, ದಿನಾಂಕ: 12–06–2002 ರ ಪ್ರಕಾರ ಎನ್.ಸಿ.ಸಿ ಇಲಾಖೆಯ ಪೂರ್ವ ಅನುಮತಿ ಪಡೆದು ವರ್ಗಾವಣೆ ಮಾಡತಕ್ಕದ್ದು.

1.17 ರಾಜ್ಯ ಸರ್ಕಾರಿ ನೌಕರರಾದ ದಂಪತಿಗಳ ವರ್ಗಾವಣೆಗಳನ್ನು ಗ್ರಾಮಾಂತರ ಪ್ರದೇಶಕ್ಕೆ ಮಾಡಲು ಆದ್ಯತೆ ನೀಡತಕ್ಕದ್ದು, ಗ್ರಾಮಾಂತರ ಪ್ರದೇಶಕ್ಕೆ ವರ್ಗಾವಣೆ ಮಾಡಲು ಸಾಧ್ಯವಾಗದೆ ನಗರ ಪ್ರದೇಶದಲ್ಲಿ ಹುದ್ದೆ ಲಭ್ಯವಿದ್ದಲ್ಲಿ ನಗರ ಪ್ರದೇಶಕ್ಕೆ ಮಾಡಲು ಪರಿಗಣಿಸುವುದು.

**2 ಪೂರ್ವಸಿದ್ಧತಾ ಹಂತ:**

2.1 ಎಲ್ಲಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಎ, ಬಿ, ಸಿ ಮತ್ತು ಡಿ ವರ್ಗಗಳಾಗಿ ವರ್ಗೀಕರಣಗೊಳಿಸುವುದು.
ಪ್ರತಿ ಶೈಕ್ಷಣಿಕ ವಲಯದ 'ಎ' (ಗ್ರಾಮ ಮತ್ತು ಹೋಬಳಿ), ಮತ್ತು 'ಬಿ' (ಎಲ್ಲಾ ತಾಲ್ಲೂಕು ಕೇಂದ್ರ) 'ಸಿ' (ಜಿಲ್ಲಾ ಕೇಂದ್ರ ಮತ್ತು (ಮೈಸೂರು, ಬೆಳಗಾಂ, ಹುಬ್ಬಳ್ಳಿ ಮತ್ತು ಧಾರವಾಡ ಸೇರಿದಂತೆ)), ಮತ್ತು 'ಡಿ' (ಬೆಂಗಳೂರು ನಗರ) ಗಳಾಗಿ ವರ್ಗೀಕರಿಸಿಕೊಳ್ಳತಕ್ಕದ್ದು, ಪ್ರತಿ ವರ್ಗದ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸಿದ ಪ್ರತಿ ವರ್ಷದ ಪೂರ್ಣ ಸೇವೆಗೆ ನಿಗದಿಪಡಿಸಿದ ಕೃಪಾಂಕಗಳನ್ನು ಕಾಲಂ (3)ರಲ್ಲಿ ತೋರಿಸಲಾಗಿದೆ. ಗ್ರಾಮೀಣ ಪ್ರದೇಶದ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುವ ಬೋಧಕರಿಗೆ/ಬೋಧಕೇತರರಿಗೆ ಪ್ರೋತ್ಸಾಹ ಮತ್ತು ಕೌನ್ಸಿಲಿಂಗ್‌ನಲ್ಲಿ ಆದ್ಯತೆ ನೀಡುವ ಉದ್ದೇಶದಿಂದ ಈ ರೀತಿ ಕೃಪಾಂಕ ನೀಡುವ ಪದ್ಧತಿಯನ್ನು ಜಾರಿಗೆ ತರಲಾಗುತ್ತಿದೆ.

| ವರ್ಗ | ವಿವರ | ಕೃಪಾಂಕ |
|---|---|---|
| 1 | 2 | 3 |
| ಎ ವರ್ಗ | ಗ್ರಾಮ ಮತ್ತು ಹೋಬಳಿ | 2.0 |
| ಬಿ ವರ್ಗ | ಎಲ್ಲಾ ತಾಲ್ಲೂಕು ಕೇಂದ್ರ | 1.75 |
| ಸಿ ವರ್ಗ | ಜಿಲ್ಲಾ ಕೇಂದ್ರ ಮತ್ತು ನಗರ ಪ್ರದೇಶ (ಬೆಂಗಳೂರು, ಮೈಸೂರು, ಬೆಳಗಾಂ, ಹುಬ್ಬಳ್ಳಿ ಮತ್ತು ಧಾರವಾಡ ಹೊರತುಪಡಿಸಿ) | 1.25 |
| ಡಿ ವರ್ಗ | ಬೆಂಗಳೂರು ಮೈಸೂರು, ಬೆಳಗಾಂ, ಹುಬ್ಬಳ್ಳಿ ಮತ್ತು ಧಾರವಾಡ | 1.00 |

2 .2 **ವರ್ಗವಾರು ಕೃಪಾಂಕ (weightage) ಆಧಾರದಲ್ಲಿ ಆದ್ಯತಾಪಟ್ಟಿ ಸಿದ್ಧಮಾಡುವುದು.**

ಕಂಡಿಕೆ 2.1 ರ ಪಟ್ಟಿಯಲ್ಲಿ ನೀಡಲಾದಂತೆ ವರ್ಗವಾರು ಕೃಪಾಂಕಗಳನ್ವಯ (weightage) ಆದ್ಯತಾ ಪಟ್ಟಿಯನ್ನು ಸಿದ್ದಮಾಡಲು, ಈಗಿನ ಕಾರ್ಯನಿರ್ವಹಿಸುವ ಸ್ಥಳವನ್ನು ಮೊದಲು ಮೇಲೆ ಹೇಳಿದ ವಿವರಣೆಯನ್ನನುಸರಿಸಿ, ಎ, ಬಿ, ಸಿ, ಅಥವಾ ಡಿ ವರ್ಗಗಳಾಗಿ ವರ್ಗೀಕರಣ ಮಾಡಿಕೊಳ್ಳಬೇಕು. ನಂತರ ಈಗ ಕಾರ್ಯನಿರ್ವಹಿಸುವ ಸ್ಥಳದಲ್ಲಿ ಬೋಧಕ/ಬೋಧಕೇತರರು ಸೇವೆ ಸಲ್ಲಿಸಿದ ವರ್ಷಗಳನ್ನು ಆ ವರ್ಗಕ್ಕೆ ನೀಡಲಾದ ಕೃಪಾಂಕಗಳಿಂದ (weightage) ಗುಣಿಸಿ, ಗುಣಿತ ಸೇವೆಯ ಪ್ರಮಾಣವನ್ನು (weighted service) ಪಡೆಯಬೇಕು. ಗುಣಿತ ಸೇವೆಯ ಪ್ರಮಾಣವನ್ನಾಧರಿಸಿ ಆದ್ಯತಾ ಪಟ್ಟಿಯನ್ನು ಸಿದ್ಧಪಡಿಸಬೇಕು.

ಉದಾ:

| A | | | B | | | C | | | D | | |
|---|---|---|---|---|---|---|---|---|---|---|---|
| ಗ್ರಾಮ ಮತ್ತು ಹೋಬಳಿ | ನೀಡುವ ಕೃಪಾಂಕ | ಗುಣಿತ ಸೇವಾ ಪ್ರಮಾಣ | ತಾಲ್ಲೂಕು ಕೇಂದ್ರ | ನೀಡುವ ಕೃಪಾಂಕ | ಗುಣಿತ ಸೇವಾ ಪ್ರಮಾಣ | ಜಿಲ್ಲಾ ಕೇಂದ್ರ ಮತ್ತು ನಗರ ಪ್ರದೇಶ | ನೀಡುವ ಕೃಪಾಂಕ | ಗುಣಿತ ಸೇವಾ ಪ್ರಮಾಣ | ಬೆಂಗಳೂರು | ನೀಡು ವ ಕೃಪಾಂಕ | ಗುಣಿತ ಸೇವಾ ಪ್ರಮಾಣ |
| 8 | 2 | 16 | 8 | 1.75 | 14 | 8 | 1.25 | 10 | 8 | 1 | 8 |

2.3 ಕ್ಯಾನ್ಸರ್, ಕಿಡ್ನಿ ವೈಪಲ್ಯ, ಹೃದಯ ಶಸ್ತ್ರ ಚಿಕಿತ್ಸೆ ಈ ಖಾಯಿಲೆಗಳಿಂದ ಬರುವ ವರ್ಗಾವಣೆ ಪ್ರಕರಣಗಳನ್ನು (ಸಂಬಂಧಿಸಿದ ಆಸ್ಪತ್ರೆಗಳ ವೈದ್ಯರು ಅಥವಾ ಜಿಲ್ಲಾ ವೈದ್ಯಾಧಿಕಾರಿಗಳ ದೃಢೀಕರಣ ಪತ್ರ ಅಗತ್ಯ) ಪರಿಗಣಿಸುವುದು.

2.4 ಶೇಕಡ 40 ಕ್ಕಿಂತ ಹೆಚ್ಚು ಅಂಗವಿಕಲತೆ ಹೊಂದಿರುವ ಅಂಗವಿಕಲರ ಪ್ರಕರಣಗಳಲ್ಲಿ ಜಿಲ್ಲಾ ವೈದ್ಯಾಧಿಕಾರಿಗಳಿಂದ ದೃಢೀಕರಣ ಪತ್ರ ಅಗತ್ಯ.

2.5 ಪತಿ–ಪತ್ನಿ ಪ್ರಕರಣಗಳಲ್ಲಿ ಕೆಳಗಿನ ಆದ್ಯತಾನುಸಾರ ವರ್ಗಾವಣೆಗೆ ಪರಿಗಣಿಸತಕ್ಕದ್ದು.

1. ಪತಿ–ಪತ್ನಿಯರಿಬ್ಬರೂ ಸರ್ಕಾರಿ ನೌಕರಿಯಲ್ಲಿರುವ ಪ್ರಕರಣಗಳು
2. ಪತಿ ಅಥವಾ ಪತ್ನಿ ಒಬ್ಬರು ರಾಜ್ಯ ಸರ್ಕಾರದ ಸೇವೆಯಲ್ಲಿ ಇಲ್ಲದ ಪ್ರಕರಣಗಳು

2.6 ಪ್ರತಿ ಗುಂಪಿನಲ್ಲಿ ಸೇವೆಗೆ ಅನುಗುಣವಾಗಿ ಆದ್ಯತಾ ಪಟ್ಟಿಯನ್ನು ತಯಾರಿಸತಕ್ಕದ್ದು.

I ವರ್ಗದ ಎ ವರ್ಗದ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ಬೋಧಕ/ಬೋಧಕೇತರರು ಗುಣಿತ ಸೇವಾ ಪ್ರಮಾಣ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ಅವಧಿ X2.0

II ಬಿ ವರ್ಗದ ಕಾಲೇಜುಗಳಿಗೆ ಗುಣಿತ ಸೇವೆ ಪ್ರಮಾಣ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ಅವಧಿ X1.75

III ಸಿ ವರ್ಗದ ಕಾಲೇಜಿಗೆ ಸಂಬಂಧಿಸಿದಂತೆ ಸೇವೆ ಸಲ್ಲಿಸಿದ ಅವದಿ X1.25

IV ಡಿ ವರ್ಗದ ಕಾಲೇಜುಗಳಿಗೆ ಗುಣಿತ ಸೇವೆ ಪ್ರಮಾಣ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ಅವಧಿ X 1.0

2.7 ಕನಿಷ್ಠ 3 ವರ್ಷ ಸೇವೆ ಸಲ್ಲಿಸದೆ ಇರುವ ಬೋಧಕ/ಬೋಧಕೇತರರ ವರ್ಗಾವಣೆ ಮಾಡತಕ್ಕದ್ದಲ್ಲ. ವರ್ಗಾವಣೆ ಮಾಡುವಾಗ ಎ ವರ್ಗದ ಕಾಲೇಜುಗಳಲ್ಲಿ 3 ವರ್ಷ, ಬಿ ವರ್ಗದ ಕಾಲೇಜುಗಳಲ್ಲಿ 5 ವರ್ಷ ಮತ್ತು ಸಿ ವರ್ಗದ ಕಾಲೇಜುಗಳಲ್ಲಿ 7 ವರ್ಷಗಳ ಸೇವೆಯ ಆದಾರದಲ್ಲೇ ವರ್ಗಾವಣೆ ಮಾಡುವುದು.

2.8 ಸೇವಾ ಅವಧಿಯನ್ನು ಲೆಕ್ಕಾಚಾರ ಮಾಡುವಾಗ ಶಿಕ್ಷಕರು ಒಂದು ವರ್ಗದ ಪ್ರದೇಶದಲ್ಲಿ ಒಟ್ಟು ಸಲ್ಲಿಸಿದ ಸೇವಾ ಅವಧಿಯನ್ನು ಮಾತ್ರ ಪರಿಗಣಿಸತಕ್ಕದ್ದು. ಯಾವುದೇ ಒಂದು ಕಾಲೇಜು ಅಥವಾ ಹುದ್ದೆಯಲ್ಲಿ ಕೆಲಸ ಮಾಡಿದ ಅವಧಿಯನ್ನು ಪರಿಗಣಿಸಲು ಬರುವುದಿಲ್ಲ. ಹೆಚ್ಚು ಗುಣಿತ ಸೇವಾ ಪ್ರಮಾಣವಿರುವ ಬೋಧಕ/ಬೋಧಕೇತರರನ್ನು ಕಡಿಮೆ ಗುಣಿತ ಸೇವೆ ಪ್ರಮಾಣ ಇರುವ ಬೋಧಕ/ಬೋಧಕೇತರರ ಪಟ್ಟಿಯ ಮೇಲೆ ಬರುವಂತೆ ಆದ್ಯತಾ ಪಟ್ಟಿಯನ್ನು ತಯಾರಿಸುವುದು.

2.9 ಪ್ರತಿ ಪಟ್ಟಿಯಲ್ಲಿಯೂ ಪುರುಷ ಬೋಧಕ/ಬೋಧಕೇತರರಿಗಿಂತ ಮೊದಲು ಮಹಿಳಾ ಬೋಧಕ/ಬೋಧಕೇತರರಿಗೆ ಆದ್ಯತೆ ನೀಡುವುದು.

3. **ಹೊಸದಾಗಿ ಆಯ್ಕೆಯಾದ ಬೋಧಕ/ಬೋಧಕೇತರರನ್ನು ಕೌನ್ಸಿಲಿಂಗ್ ಮೂಲಕ ನೇಮಕಾತಿ ಮಾಡುವುದು**

3.1 ಹೊಸದಾಗಿ ಆಯ್ಕೆಯಾದ ಹಾಗೂ ಮುಂಬಡ್ತಿ ಹೊಂದುವ ಬೋಧಕ/ಬೋಧಕೇತರರನ್ನು ಎ ಮತ್ತು ಬಿ ವರ್ಗದ ಕಾಲೇಜುಗಳಿಗೆ ಮಾತ್ರ ಕೌನ್ಸಿಲಿಂಗ್ ಮೂಲಕ ನೇಮಕಾತಿ ಸ್ಥಳನಿಯುಕ್ತಿ ಮಾಡಬೇಕು. ಈ ವರ್ಗದ ಕಾಲೇಜುಗಳಲ್ಲಿ ಹುದ್ದೆಗಳು ಖಾಲಿ ಇಲ್ಲದಿದ್ದ ಪಕ್ಷದಲ್ಲಿ ನಂತರದ ವರ್ಗದ ಕಾಲೇಜುಗಳಿಗೆ ಅಂದರೆ ಮೊದಲು ಸಿ, ಡಿ, ವರ್ಗದ ಕಾಲೇಜುಗಳಿಗೆ ಕ್ರಮವಾಗಿ ಆದ್ಯತೆ ನೀಡುವುದು

3.2 ಕಾಲೇಜುಗಳಲ್ಲಿ ಅಗತ್ಯತೆ ಮೇರೆಗೆ ಕೊರತೆ ಇರುವ ಖಾಲಿ ಹುದ್ದೆಗಳನ್ನು ಕೌನ್ಸಿಲಿಂಗ್‌ನಲ್ಲಿ ಮೊದಲು ಭರ್ತಿ ಮಾಡತಕ್ಕದ್ದು.

4 ವೇಳಾ ಪಟ್ಟಿಯನ್ನು ಈ ಕೆಳಕಂಡಂತೆ ಗೊತ್ತುಪಡಿಸಬೇಕು.

**ಪೂರ್ವಸಿದ್ಧತೆಯಾಗಿ ಎಲ್ಲಾ ಕಾಲೇಜುಗಳನ್ನು ಎ, ಬಿ, ಸಿ ಮತ್ತು ಡಿ ವರ್ಗಗಳಾಗಿ ವರ್ಗೀಕರಿಸುವುದು;**

ಮೊದಲನೆಯದಾಗಿ ಹೆಚ್ಚುವರಿ ಬೋಧಕರು ಮತ್ತು ಬೋಧಕೇತರರನ್ನು ಅಗತ್ಯವಿರುವ ಕಾಲೇಜುಗಳಿಗೆ ಮರುಹಂಚಿಕೆ ವೇಳಾಪಟ್ಟಿಯಂತೆ ಕೌನ್ಸಿಲಿಂಗ್ ಮೂಲಕ ಮಾಡುವುದು;

ಎರಡನೆಯದಾಗಿ ಕಡ್ಡಾಯ ಗ್ರಾಮಾಂತರ ಸೇವೆ ಸಲ್ಲಿಸಿರದ ಬೋಧಕ ಹಾಗೂ ಬೋಧಕೇತರರನ್ನು ಕೌನ್ಸಿಲಿಂಗ್ ಮೂಲಕ ವರ್ಗಾಯಿಸುವುದು;

ಮೂರನೆಯದಾಗಿ ದೂರು ಪ್ರಕರಣಗಳ ವರ್ಗಾವಣೆಗಳು (ಕೌನ್ಸಿಲಿಂಗ್ ಮೂಲಕ ಮಾಡುವಂತಿಲ್ಲ)

ನಾಲ್ಕನೆಯದಾಗಿ ಕೋರಿಕೆ ವರ್ಗಾವಣೆಗಳು ಕೌನ್ಸಿಲಿಂಗ್ ಮೂಲಕ ಮಾಡುವುದು;

ಐದನೆಯದಾಗಿ ಕೋರಿಕೆ ಮತ್ತು ಸಾಮಾನ್ಯ ವರ್ಗಾವಣೆಗಾಗಿ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯಿಂದ ಅರ್ಜಿಗಳನ್ನು ಕರೆಯಲು ಪ್ರಕಟಣೆಯ ದಿನಾಂಕ ನಿಗದಿಪಡಿಸುವುದು;

ವರ್ಗಾವಣೆಗೆ ಅರ್ಜಿ ಸಲ್ಲಿಸಲು ಅಂತಿಮ ದಿನಾಂಕ:

ವರ್ಗಾವಣೆ ಅರ್ಜಿಗಳ ಪರಿಶೀಲನೆ ಮತ್ತು ದೃಢೀಕರಣ;

ಆದ್ಯತಾ ಪಟ್ಟಿ ಪ್ರಕಟಣೆ;

ಅಂತಿಮವಾಗಿ ಕೌನ್ಸಿಲಿಂಗ್

ಎಲ್ಲಾ ವರ್ಗಾವಣೆಗಳು ಸೇರಿ ಪ್ರತಿ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ಬೋಧಕೇತರ ಸಂಖ್ಯಾಬಲದ ಶೇ 5ಕ್ಕು ಹೆಚ್ಚು ವರ್ಗಾವಣೆ ಮೀರುವಂತಿಲ್ಲ.

5. **ಕೌನ್ಸಿಲಿಂಗ್ ಮೂಲಕ ಮರು ಹಂಚಿಕೆ ಹಾಗೂ ವರ್ಗಾವಣೆಗಳನ್ನು ಮಾಡುವುದು.**

**5.1 ಹಂತ–1 (ಹೆಚ್ಚುವರಿ ಬೋಧಕರ ಮರು ಹಂಚಿಕೆ)**

ಹೆಚ್ಚುವರಿ ಬೋಧಕರಿರುವ ಕಾಲೇಜುಗಳಿಂದ ಅಗತ್ಯವಿರುವ ಕಾಲೇಜುಗಳಿಗೆ ಹೆಚ್ಚುವರಿ ಬೋಧಕರನ್ನು ಹುದ್ದೆ ಸಮೇತ ಸರ್ಕಾರದ ಪೂರ್ವಾನುಮತಿ ಪಡೆದು ಮರುಹಂಚಿಕೆ ಮಾಡುವುದು.

**5.2 ಹಂತ–2 (ಕಡ್ಡಾಯ ಗ್ರಾಮಾಂತರ ಸೇವೆ)**

ಈ ಕೌನ್ಸಿಲಿಂಗ್‌ನಲ್ಲಿ ಗ್ರಾಮೀಣ ಪ್ರದೇಶದ ಕಾಲೇಜುಗಳಿಗೆ ಬೇಕಾದ ಬೋಧಕರ ಅವಶ್ಯಕತೆಯನ್ನು ಗಮನದಲ್ಲಿಟ್ಟುಕೊಂಡು ಕೆಳಕಂಡಂತೆ ವರ್ಗಾವಣೆ ಮಾಡುವುದು.

5.3 ಎಲ್ಲಾ ಬೋಧಕರು ಹಾಗೂ ಬೋಧಕೇತರರು ನಂಜುಂಡಪ್ಪ ವರದಿಯಲ್ಲಿ ವರ್ಗೀಕರಿಸಿರುವ ಅತ್ಯಂತ ಹಿಂದುಳಿದ 39 ತಾಲೂಕು ವ್ಯಾಪ್ತಿಯಲ್ಲಿ ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದವರಿಗೆ, ಮುಂದಿನ ವರ್ಗಾವಣೆಯಲ್ಲಿ, ಅಭ್ಯರ್ಥಿಯು ಯಾವುದೇ ಸ್ಥಳಗಳನ್ನು ಆಯ್ಕೆ ಮಾಡುವ ಅವಕಾಶ ನೀಡಲಾಗುವುದು.

5.4 ಎಲ್ಲಾ ಬೋಧಕರು ಹಾಗೂ ಬೋಧಕೇತರರು ಎ ವರ್ಗದ ಕಾಲೇಜುಗಳಲ್ಲಿ 3 ವರ್ಷ, ಬಿ ವರ್ಗದ ಕಾಲೇಜುಗಳಲ್ಲಿ 5 ವರ್ಷ ಮತ್ತು ಸಿ ವರ್ಗದ ಕಾಲೇಜುಗಳಲ್ಲಿ 7 ವರ್ಷಗಳ ಸೇವೆಯನ್ನು ಸಲ್ಲಿಸಬೇಕು.

5.5 ಒಟ್ಟಿಗೆ 15 ವರ್ಷಗಳ ಕಾಲ ನಗರ ಪ್ರದೇಶದಲ್ಲಿ ಸೇವೆ ಸಲ್ಲಿಸಿದ ಆದರೆ 5 ವರ್ಷಗಳ ಕಡ್ಡಾಯ ಹಿಂದುಳಿದ ಪ್ರದೇಶಗಳಲ್ಲಿ ಸೇವೆಯನ್ನು ಸಲ್ಲಿಸಿರದ ಬೋಧಕರನ್ನು ವೃಂದ ಬಲದ ಶೇಕಡ 2ಕ್ಕೆ ಮೀರದಂತೆ ಸೀಮಿತಗೊಳಿಸಿ ಆಡಳಿತಾತ್ಮಕವಾಗಿ ನಗರ ಪ್ರದೇಶದ ಹೊರಗಿನ ಗ್ರಾಮೀಣ ಕಾಲೇಜುಗಳಿಗೆ ಕೌನ್ಸಿಲಿಂಗ್ ಮೂಲಕ ವರ್ಗಾಯಿಸಬೇಕು.

**6. ಕೌನ್ಸಿಲಿಂಗ್ ಮೂಲಕ ವೃಂದದೊಳಗಿನ ಕೋರಿಕೆ ವರ್ಗಾವಣೆ ಬಗ್ಗೆ:**

- ಸಾಮಾನ್ಯ ಸೂಚನೆಗಳು–ವೃಂದದೊಳಗಿನ ಕೋರಿಕೆ ವರ್ಗಾವಣೆ ಕುರಿತು
- ಕೌನ್ಸಿಲಿಂಗ್ ಪ್ರಾರಂಭಕ್ಕೆ ಮುನ್ನಾ ವರ್ಗಾವಣೆ ಮಾದರಿ ಅರ್ಜಿಯನ್ನು ಜಂಟಿ ನಿರ್ದೇಶಕರ ಹಾಗೂ ಕಾಲೇಜುಗಳ ಪ್ರಕಟಣಾ ಫಲಕದಲ್ಲಿ ಸಂಬಂಧಿಸಿದವರ ತಿಳುವಳಿಕೆಗೆ ತರತಕ್ಕದ್ದು;
- ಅಪೇಕ್ಷೆಯುಳ್ಳ ಬೋಧಕ ಹಾಗೂ ಬೋಧಕೇತರರ ನಿಗದಿತ ವರ್ಗಾವಣೆ ಅರ್ಜಿ ನಮೂನೆಯಲ್ಲಿ ವರ್ಗಾವಣೆಯನ್ನು ಕೋರಿ ಸಂಬಂಧಿಸಿದ ಜಂಟಿ ನಿರ್ದೇಶಕರ ಹಾಗೂ ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಸಲ್ಲಿಸತಕ್ಕದ್ದು;
- ಕೌನ್ಸಿಲಿಂಗ್‌ಗಾಗಿ ಜಂಟಿ ನಿರ್ದೇಶಕರಿಗೆ ಹಾಗೂ ಕಾಲೇಜುಗಳ ಪ್ರಾಂಶುಪಾಲರುಗಳ ಮೂಲಕ ಸಲ್ಲಿಸಿದ ವರ್ಗಾವಣೆ ಅರ್ಜಿಗಳನ್ನು ಮಾತ್ರ ಪರಿಗಣಿಸಲಾಗುವುದು
- ಜಂಟಿ ನಿರ್ದೇಶಕರು ಹಾಗೂ ಪ್ರಾಂಶುಪಾಲರುಗಳು ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ನಿಗದಿತ ಅವಧಿಯೊಳಗೆ ತಮ್ಮ ಷರಾದೊಂದಿಗೆ ಸಂಬಂಧಿಸಿದ ಜಂಟಿ ನಿರ್ದೇಶಕರು ಹಾಗೂ ಪ್ರಾಂಶುಪಾಲರುಗಳು ವರ್ಗಾವಣೆಗೆ ಸಂಬಂಧಿಸಿದ ಅರ್ಜಿಗಳನ್ನು ಕ್ರೋಢೀಕರಿಸಿ ಸಲ್ಲಿಸುವುದು.
- ಜಂಟಿ ನಿರ್ದೇಶಕರು ಹಾಗೂ ಪ್ರಾಂಶುಪಾಲರುಗಳು ಸಲ್ಲಿಸಿದ ಅರ್ಜಿಗಳ ಆಧಾರದ ಮೇಲೆ ವಿವರಿಸಿದಂತೆ ಆದ್ಯತಾ ಪಟ್ಟಿಯನ್ನು ತಯಾರಿಸುವುದು.

**7. ಪರಸ್ಪರ ವರ್ಗಾವಣೆಗಳು:**

ಎಲ್ಲಾ ಪರಸ್ಪರ ವರ್ಗಾವಣೆಗಳನ್ನು ಇಬ್ಬರೂ ಬೋಧಕ ಹಾಗೂ ಇಬ್ಬರೂ ಬೋಧಕೇತರರ ಒಪ್ಪಿಗೆಯನ್ನು ಪ್ರಾಂಶುಪಾಲರು/ಜಂಟಿ ನಿರ್ದೇಶಕರಿಂದ ದೃಢೀಕರಿಸಿದಲ್ಲಿ ಮಾತ್ರ ಮಾಡತಕ್ಕದ್ದು. ವರ್ಗಾವಣೆ ಆದೇಶಗಳನ್ನು ಜಾರಿ ಮಾಡುವ ಮುನ್ನ ಇದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

**8. ಇತರೆ ಅಂಶಗಳು**

- ನಗರ ಪ್ರದೇಶದಲ್ಲಿ ಸೇವೆ ಸಲ್ಲಿಸಿರುವ ಬೋಧಕರು ಹಾಗೂ ಬೋಧಕೇತರರು ಹಿಂದುಳಿದ ಪ್ರದೇಶದ ಕಾಲೇಜುಗಳಿಗೆ ಪರಸ್ಪರ ವರ್ಗಾವಣೆಯನ್ನು, ಕೂಡಲೇ ಪರಿಗಣಿಸಿ ಅವರುಗಳಿಗೆ ಮೊದಲ ಆದ್ಯತೆ ನೀಡಲಾಗುವುದು ನಂತರ ನಗರದಿಂದ ನಗರ ಪ್ರದೇಶಕ್ಕೆ ವರ್ಗಾವಣೆಗೆ ಅವಕಾಶವಿಲ್ಲ
- ವರ್ಗಾವಣೆಯನ್ನು ಕೌನ್ಸಿಲಿಂಗ್ ಮೂಲಕ ನ್ಯಾಯಯುತ ಮತ್ತು ಪಾರದರ್ಶಕ ರೀತಿಯಲ್ಲಿ ಮಾಡುವುದು.
- ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯ ಅನುಕೂಲಕ್ಕಾಗಿ ಹುದ್ದೆಗಳನ್ನು ಸ್ಥಳಾಂತರಿಸಿ ವರ್ಗಾವಣೆಗಳನ್ನು ಮಾಡತಕ್ಕದ್ದಲ್ಲ.
- ಎಲ್ಲಾ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಸಿಬ್ಬಂದಿ ಮಾದರಿ ಪ್ರಕಾರ ಬೋಧಕ (ಗ್ರಂಥಪಾಲಕರು ಮತ್ತು ದೈಹಿಕ ಶಿಕ್ಷಣ ಶಿಕ್ಷಕರನ್ನೊಳಗೊಂಡು) ಹಾಗೂ ಬೋಧಕೇತರರು ಇರುವಂತೆ ನೋಡಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1668 **ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ).

**ವಿಷಯ:** ಕಾರವಾರದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್ ಸ್ಥಾಪಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ 27–08–2008 ರಂದು ನಡೆದ ಸಚಿವ ಸಂಪುಟ ಸಮಿತಿ ಸಭೆಯ ನಿರ್ಣಯ.

2. ಎ.ಐ.ಸಿ.ಟಿ.ಇ ಪತ್ರ ಸಂಖ್ಯೆ : 06/ಕೆಟಿಕೆ/ Engg/2009–10–/001ದಿನಾಂಕ 06.02.2009

3. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಟಿಇ 109 ಡಿವಿಪಿ (1) 2006 ದಿನಾಂಕ 13.08.2008

**ಪ್ರಸ್ತಾವನೆ :**

ಓದಲಾದ (1) ರ ದಿನಾಂಕ 27.08.2008 ರಂದು ನಡೆದ ಸಭೆಯಲ್ಲಿ ಸಚಿವ ಸಂಪುಟ ಉಪ ಸಮಿತಿಯು ಕಾರವಾರದಲ್ಲಿ 2009–10ರ ಶೈಕ್ಷಣಿಕ ಸಾಲಿನಿಂದ ಇಂಜಿನಿಯರಿಂಗ್ ಕಾಲೇಜು ಪ್ರಾರಂಭಿಸುವ ಸಲುವಾಗಿ ಎ.ಐ.ಸಿ.ಟಿ.ಇ ಅನುಮೋದನೆ ಪಡೆಯಲು ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಲು ನಿರ್ಣಯಿಸಲಾಗಿತ್ತು. ಅದರಂತೆ, ಓದಲಾದ (2)ರ ದಿನಾಂಕ:06.02.2009 ರ ಪತ್ರದಲ್ಲಿ ಈ ಪ್ರಸ್ತಾವನೆಗೆ ಎ.ಐ.ಸಿ.ಟಿ.ಇ ಯು ಅನುಮೋದನೆ ನೀಡಿದೆ.

ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ ಇವರು ಓದಲಾದ (3) ದಿನಾಂಕ 13.08.2008 ರಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಕಾರವಾರದಲ್ಲಿ ಇಂಜಿನಿಯರಿಂಗ್ ಕಾಲೇಜು ಪ್ರಾರಂಭಿಸಲು ಬೇಕಾಗಬಹುದಾದ ಆವರ್ತ ಮತ್ತು ಅನಾವರ್ತ ವೆಚ್ಚಗಳಿಗೆ ಅನುಮೋದನೆ ಕೋರಿರುತ್ತಾರೆ.

ಈ ಪ್ರಸ್ತಾವನೆ ಕುರಿತು ಸಚಿವ ಸಂಪುಟವು ದಿನಾಂಕ 18.06.2009 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಈ ಪ್ರಸ್ತಾವನೆಗೆ ಅನುಮೋದನೆ ನೀಡಿದೆ.

ಸರ್ಕಾರವು ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 191 ಯೋಯೋಕ 2008, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಕಾರವಾರ ಇಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2009–10ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಕಾಲೇಜಿಗೆ ಅಗತ್ಯವಿರುವ ಸಿಬ್ಬಂದಿ ವಿವರಗಳನ್ನು ಅನುಬಂಧದಲ್ಲಿ ಇರುವಂತೆ ಒದಗಿಸಿದೆ. ಪ್ರಥಮ ಹಂತದಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ಸರ್ಕಾರಿ ಹಾಗೂ ಖಾಸಗಿ ಪಾಲಿಟೆಕ್ನಿಕ್ ಕಾಲೇಜುಗಳಿಂದ ಎರವಲು ಪಡೆಯುವುದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2203–00–112–0–02 ಇಂಜಿನಿಯರಿಂಗ್ ಕಾಲೇಜುಗಳು" ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 755 ವೆಚ್ಚ–8/2009 ರ ದಿನಾಂಕ 11.06.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ : ಇಡಿ 191 ಯೋಯೋಕ 2008**

**ಬೆಂಗಳೂರು, ದಿನಾಂಕ 26ನೇ ಜೂನ್ 2009ರ ಅನುಬಂಧ**

**ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವಿವರ :**

| ಕ್ರಮ ಸಂಖ್ಯೆ | ಹುದ್ದೆಯ ವಿವರ | ಸಿವಿಲ್ | ಮೆಕ್ಯಾನಿಕಲ್ | ಇ & ಸಿ | ಕಂಪ್ಯೂಟರ್ ಸೈನ್ಸ್ |
|---|---|---|---|---|---|
| 01 | ಪ್ರಾಧ್ಯಾಪಕರು | 2 | 2 | 1 | 1 |
| 02 | ಸಹಾಯಕ ಪ್ರಾಧ್ಯಾಪಕರು | 4 | 4 | 4 | 2 |
| 03 | ಉಪನ್ಯಾಸಕರು | 10 | 9 | 9 | 5 |
| 04 | ಫೋರ್ ಮನ್ | 1 | 1 | 1 | 1 |
| 05 | ಇನ್ ಸ್ಟ್ರಕ್ಟರ್ | 2 | 3 | 1 | 1 |
| 06 | ಸಹಾಯಕಇನ್ಸ್ ಸ್ಟ್ರಕ್ಟರ್ | 4 | 3 | 1 | –– |
| 07 | ಮೆಕ್ಯಾನಿಕ್ | 4 | 3 | 1 | 2 |
| 08 | ಹೆಲ್ಪರ್ | 8 | 10 | 4 | 3 |
| 09 | ಡ್ರಾಫ್ಟ್ ಮನ್ | 1 | ––– | ––– | ––– |
| | **ಒಟ್ಟು** | **36** | **35** | **22** | **15** |

**ಸಾಮಾನ್ಯ ಸಿಬ್ಬಂದಿ ವರ್ಗ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ಲೇಸ್ ಮೆಂಟ್ ಮತ್ತು ಟ್ರೈನಿಂಗ್ ಅಧಿಕಾರಿ | 1 |
| 2 | ಉಪನ್ಯಾಸಕರು (ಜಿಯಾಲಜಿ) | 1 |
| 3 | ಉಪನ್ಯಾಸಕರು (ಆಂಗ್ಲಭಾಷೆ) | 1 |
| 4 | ಉಪನ್ಯಾಸಕರು (ವಿಜ್ಞಾನ ಮತ್ತು ಗಣಿತ) | 2 |
| 5 | ಉಪನ್ಯಾಸಕರು (ಭೌತಶಾಸ್ತ್ರ) | 2 |
| 6 | ಉಪನ್ಯಾಸಕರು (ರಸಾಯನಶಾಸ್ತ್ರ) | 2 |
| 7 | ಉಪನ್ಯಾಸಕರು (ಇಂಜಿನಿಯರಿಂಗ್ ಮ್ಯಾಥಮೆಟಿಕ್ಸ್) | 4 |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 8 | ಉಪನ್ಯಾಸಕರು (ಇ ಅಂಡ್ ಇ) | 1 |
| 9 | ದೈಹಿಕ ಶಿಕ್ಷಣ ನಿರ್ದೇಶಕರು (ಎಐಸಿಟಿಇ ವೇತನ ಶ್ರೇಣಿ) | 1 |
| 10 | ಗ್ರಂಥಪಾಲಕರು (ಎಐಸಿಟಿಇ ವೇತನ ಶ್ರೇಣಿ) | 1 |
| 11 | ಸಹಾಯಕ ಗ್ರಂಥಪಾಲಕರು (ರಾಜ್ಯ ವೇತನ ಶ್ರೇಣಿ) | 2 |
| 12 | ಸಿಸ್ಟಂ ಅನಾಲಿಸ್ಟ್ | 1 |
| 13 | ಪ್ರೋಗ್ರಾಮರ್ | 1 |
| 14 | ಕಂಪ್ಯೂಟರ್ ಅಪರೇಟರ್ | 2 |
| | **ಒಟ್ಟು** | **23** |

**ಆಡಳಿತ ಸಿಬ್ಬಂದಿ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಾಂಶುಪಾಲರು | 1 |
| 2 | ಸಹಾಯಕ ಆಡಳಿತಾಧಿಕಾರಿ | 1 |
| 3 | ರಿಜಿಸ್ಟ್ರಾರ್ | 2 |
| 4 | ಅಧೀಕ್ಷಕರು | 4 |
| 5 | ಪ್ರಥಮ ದರ್ಜೆ ಸಹಾಯಕರು | 10 |
| 6 | ದ್ವಿತಿಯ ದರ್ಜೆ ಸಹಾಯಕರು | 12 |
| 7 | ಶೀಘ್ರಲಿಪಿ ಗಾರರು | 1 |
| 8 | ಬೆರಳಚ್ಚುಗಾರರು | 2 |
| 9 | ಕಛೇರಿ ಸಹಾಯಕರು (ಅಟೆಂಡರ್) | 2 |
| 10 | ಸೇವಕರು / ಜಾಡಮಾಲಿ | 10 |
| 11 | ವಾಹನ ಚಾಲಕರು | 5 |
| 12 | ಬಾಣಸಿಗ | 2 |
| 13 | ಸಹಾಯಕ ಬಾಣಸಿಗ | 2 |

**ವರ್ಷವಾರು ನೇಮಕ ಮಾಡಬೇಕಾದ ಸಿಬ್ಬಂದಿ ವಿವರ**

(ನಾಲ್ಕು ಕೋರ್ಸುಗಳಿಗೆ ಅಗತ್ಯವಿರುವ ಬೋಧಕ, ಬೋಧಕೇತರ ಹಾಗೂ ಆಡಳಿತ ಸಿಬ್ಬಂದಿಗಳ ಸಂಖ್ಯಾವಾರು ವಿವರ)

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | 1ನೇ ವರ್ಷ | 2ನೇ ವರ್ಷ | 3ನೇ ವರ್ಷ | 4ನೇ ವರ್ಷ |
|---|---|---|---|---|---|
| 01 | ಪ್ರಾಂಶುಪಾಲರು | 1 | –– | –– | –– |
| 02 | ಪ್ರಾಧ್ಯಾಪಕರು | 2 | 2 | 1 | 1 |
| 03 | ಸಹಾಯಕ ಪ್ರಾಧ್ಯಾಪಕರು | 4 | 4 | 4 | 2 |
| 04 | ಉಪನ್ಯಾಸಕರು | 19 | 10 | 10 | 7 |
| 05 | ಫೋರ್ ಮನ್ | 2 | 1 | 1 | –– |
| 06 | ಇನ್ಸ್ ಸ್ಟ್ರಕ್ಟರ್ | 2 | 2 | 2 | 1 |
| 07 | ಸಹಾಯಕ ಇನ್ಸ್ಟ್ರಕ್ಟ್ರರ್ | 2 | 2 | 2 | 2 |
| 08 | ಮೆಕ್ಯಾನಿಕ್ | 4 | 2 | 2 | 2 |
| 09 | ಹೆಲ್ಪರ್ | 10 | 09 | 04 | 02 |
| 10 | ಡ್ರಾಫ್ಟ್ ಮನ್ | – | 01 | –– | –– |
| 11 | ಸಿಸ್ಟಂ ಅನಾಲಿಸ್ಟ್ (ಎಐಸಿಟಿಇ ವೇತನ ಶ್ರೇಣಿ) | 1 | –– | –– | –– |
| 12 | ಪ್ರೋಗ್ರಾಮರ್ | 1 | –– | –– | –– |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | 1ನೇ ವರ್ಷ | 2ನೇ ವರ್ಷ | 3ನೇ ವರ್ಷ | 4ನೇ ವರ್ಷ |
|---|---|---|---|---|---|
| 13 | ಕಂಪ್ಯೂಟರ್ ಆಪರೇಟರ್ | 1 | 1 | –– | –– |
| 14 | ಪ್ಲೇಸ್‌ಮೆಂಟ್ ಅಂಡ್ ಟ್ರೈನಿಂಗ್ ಆಫೀಸರ್ | –– | 1 | –– | –– |
| 15 | ಸಹಾಯಕ ಆಡಳಿತಾಧಿಕಾರಿ | 1 | – | –– | –– |
| 16 | ರಿಜಿಸ್ಟ್ರಾರ್ | 1 | 1 | –– | –– |
| 17 | ಗ್ರಂಥಪಾಲಕರು (ಎಐಸಿಟಿಇವೇತನ ಶ್ರೇಣಿ) | 1 | –– | –– | –– |
| 18 | ಸಹಾಯಕ ಗ್ರಂಥಪಾಲಕರು | 1 | 1 | –– | –– |
| 19 | ದೈಹಿಕಶಿಕ್ಷಣ ನಿರ್ದೇಶಕರು (ಎಐಸಿಟಿಇ ವೇತನ ಶ್ರೇಣಿ) | 1 | –– | –– | –– |
| 20 | ಅಧೀಕ್ಷಕರು | 2 | 2 | –– | –– |
| 21 | ಪ್ರಥಮ ದರ್ಜೆ ಸಹಾಯಕರು | 4 | 3 | 3 | –– |
| 22 | ದ್ವಿತಿಯ ದರ್ಜೆ ಸಹಾಯಕರು | 4 | 4 | 4 | –– |
| 23 | ಶೀಘ್ರಲಿಪಿಗಾರರು | 1 | –– | –– | –– |
| 24 | ಬೆರಳಚ್ಚುಗಾರರು | 1 | 1 | –– | –– |
| 25 | ವಾಹನ ಚಾಲಕರು | 2 | 1 | 2 | –– |
| 26 | ಕಛೇರಿ ಸಹಾಯಕರು (ಅಟೆಂಡರ್) | 1 | 1 | –– | –– |
| 27 | ಸೇವಕರು | 5 | 3 | 2 | –– |
| 28 | ಬಾಣಸಿಗ | 1 | 1 | –– | –– |
| 29 | ಸಹಾಯಕ ಬಾಣಸಿಗ | 1 | 1 | –– | –– |
| | **ಒಟ್ಟು** | **76** | **54** | **37** | **17** |

**ಎಸ್.ಎಂ. ನಂದಕುಮಾರ್**

ಪಿ.ಆರ್. 1670 ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ರಾಜ್ಯದಲ್ಲಿನ ಸರ್ಕಾರಿ ಪ್ರೌಢಶಾಲೆಗಳಲ್ಲಿ ನೇರ ನೇಮಕಾತಿಯಿಂದ ಭರ್ತಿ ಮಾಡಲು ಖಾಲಿಯಿರುವ ಸಹ ಶಿಕ್ಷಕರ ಗ್ರೇಡ್–2 ಹುದ್ದೆಗಳಿಗೆ ಅತಿಥಿ ಶಿಕ್ಷಕರನ್ನು, ಗೌರವಧನದ ಆಧಾರದ ಮೇಲೆ ನೇಮಕ ಮಾಡವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ. ಇಡಿ 690 ಎಲ್‌ಬಿಪಿ 2008, ದಿ:26.12.08.

**ಪ್ರಸ್ತಾವನೆ:**

ರಾಜ್ಯದಲ್ಲಿನ ಸರ್ಕಾರಿ ಪ್ರೌಢಶಾಲೆಗಳಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಖಾಲಿಯಿರುವಂತಹ ಸಹ ಶಿಕ್ಷಕರು, ಗ್ರೇಡ್–2 ಹುದ್ದೆಗಳನ್ನು ಗೌರವಧನ ಸಂಭಾವನೆ ಆಧಾರದ ಮೇಲೆ ಅತಿಥಿ ಶಿಕ್ಷಕರನ್ನಾಗಿ ನೇಮಿಸಿಕೊಳ್ಳಲು ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಿ ಆದೇಶ ಹೊರಡಿಸಲಾಗಿತ್ತು. ಈ ನೇಮಕಾತಿಯು ಸದರಿ ಹುದ್ದೆಗಳಿಗೆ ಖಾಯಂ ಶಿಕ್ಷಕರ ನೇಮಕಾತಿ ಆಗುವವರೆಗೆ ಅಥವಾ 2008–09ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಎಂದು ಆದೇಶಿಸಲಾಗಿತ್ತು.

ಪ್ರಸ್ತುತ 2009–10ನೇ ಶೈಕ್ಷಣಿಕ ಸಾಲಿನಲ್ಲಿ ತರಗತಿಗಳು ಪ್ರಾರಂಭವಾಗಿದ್ದು, ಈ ಹುದ್ದೆಗಳಿಗೆ ಖಾಯಂ ಶಿಕ್ಷಕರ ಹುದ್ದೆಗಳನ್ನು ಇದುವರೆವಿಗೂ ನೇಮಿಸದೇ ಇರುವುದರಿಂದ, ಶಿಕ್ಷಕರ ಕೊರತೆಯಿಂದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ತೊಂದರೆಯಾಗುವುದನ್ನು ಸರ್ಕಾರವು ಮನಗಂಡು 2009–10ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಅಥವಾ ಸದರಿ ಹುದ್ದೆಗಳಿಗೆ ಖಾಯಂ ಶಿಕ್ಷಕರನ್ನು ನೇಮಿಸಿಕೊಳ್ಳುವವರೆಗೆ ಇವೆರಡರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳುವ ಬಗ್ಗೆ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 294 ಎಲ್‌ಬಿಪಿ 2009, ಬೆಂಗಳೂರು, ದಿನಾಂಕ: 10ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಸರ್ಕಾರಿ ಪ್ರೌಢಶಾಲೆಯಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಖಾಲಿಯಿರುವ ಸಹ ಶಿಕ್ಷಕರ ಗ್ರೇಡ್–2 ಹುದ್ದೆಗಳಲ್ಲಿ 2500 ಹುದ್ದೆಗಳಿಗೆ ಮಾತ್ರ ಅತಿಥಿ ಶಿಕ್ಷಕರನ್ನು, ಸದರಿ ಹುದ್ದೆಗಳಿಗೆ ಖಾಯಂ ಶಿಕ್ಷಕರ ನೇಮಕಾತಿಯಾಗುವವರೆಗೆ ಅಥವಾ 2009–10ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕಾತಿ ಪ್ರಾಧಿಕಾರವಾದ ಸಂಬಂಧಪಟ್ಟ ಸರ್ಕಾರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಕಾತಿ ಮಾಡಿಕೊಳ್ಳಲು ಸರ್ಕಾರವು ಮಂಜೂರಾತಿ ನೀಡಿದೆ.

**ಷರತ್ತುಗಳು**

1) ಮಂಜೂರಾದ ಹಾಗೂ ನೇರ ನೇಮಕಾತಿಯಿಂದ ಭರ್ತಿ ಮಾಡಲು ಖಾಲಿಯಿರುವ ಹುದ್ದೆಗಳಿಗೆ ಮಾತ್ರ ಅತಿಥಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳತಕ್ಕದ್ದು.
2) ಪ್ರತಿ ಅತಿಥಿ ಶಿಕ್ಷಕರು ನಿಗದಿಪಡಿಸಲಾದ ಬೋಧನಾ ಅವಧಿಗಳಿಗೆ ಮಾತ್ರ ಕಾರ್ಯನಿರ್ವಹಿಸತಕ್ಕದ್ದು.
3) ಈ ಅತಿಥಿ ಶಿಕ್ಷಕರ ಸೇವೆಯನ್ನು ಖಾಯಂ ಶಿಕ್ಷಕರ ನೇಮಕಾತಿ ಆಗುವವರೆಗೆ ಅಥವಾ 2009–10ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದೊಳಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಬಳಸಿಕೊಳ್ಳತಕ್ಕದ್ದು.
4) ಸರ್ಕಾರದ ನಿಯಮಗಳನ್ವಯ ಈ ಅವಧಿಯಲ್ಲಿ ಖಾಯಂ ಶಿಕ್ಷಕರು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ತಕ್ಷಣ ಅತಿಥಿ ಶಿಕ್ಷಕರ ಕಾರ್ಯನಿರ್ವಹಣೆಯು ತಂತಾನೆ ರದ್ದಾಗುತ್ತದೆ.
5) ಶಿಕ್ಷಕರೇ ಇಲ್ಲದಿರುವ ಸ್ಥಳದಲ್ಲಿ ಹಾಗೂ ನಿಯೋಜನೆಯಂತಹ ಬದಲಿ ವ್ಯವಸ್ಥೆ ಮಾಡಲು ಸಾದ್ಯವಿಲ್ಲದಿರುವ ಸ್ಥಳದಲ್ಲಿ ಮಾತ್ರ ಅತಿಥಿ ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳತಕ್ಕದ್ದು.
6) ಪ್ರತಿ ಅತಿಥಿ ಶಿಕ್ಷಕರಿಗೆ ಪ್ರತಿ ದಿನಕ್ಕೆ ರೂ. 125/– ಗಳಂತೆ ತಿಂಗಳಿಗೆ ಗರಿಷ್ಟ ರೂ. 3000–00 ಗಳಿಗೆ ಮೀರದಂತೆ ಗೌರವಧನ ನಿಗದಿಪಡಿಸತಕ್ಕದ್ದು.
7) ಅತಿಥಿ ಶಿಕ್ಷಕರ ಸೇವೆಯನ್ನು ಬಳಸಿಕೊಳ್ಳುವಾಗ ಅವರಿಗೆ ಸಕ್ಷಮ ಪ್ರಾಧಿಕಾರದ ಆದೇಶವಿಲ್ಲದೆ ಯಾವುದೇ ಆದೇಶವನ್ನು ನೀಡಬಾರದು. ಇವರ ಹೆಸರುಗಳನ್ನು ಖಾಯಂ ಶಿಕ್ಷಕರ ಹಾಜರಾತಿ ವಹಿಯಲ್ಲಿ ನಮೂದಿಸಬಾರದು. ಗೌರವಧನ ವಿತರಣೆ ಮಾಡಿದ್ದಕ್ಕೆ ಅವರಿಂದ ರಸೀದಿಯನ್ನು ಪಡೆಯತಕ್ಕದ್ದು.
8) ಈ ರೀತಿ ನೇಮಕಾತಿ ಮಾಡಿಕೊಂಡ ಶಿಕ್ಷಕರಿಗೆ ಯಾವುದೇ ರೀತಿಯ ಸೇವಾ ಪ್ರಮಾಣ ಪತ್ರವನ್ನು ನೀಡುವಂತಿಲ್ಲ. ಹಾಜರಾತಿ ಪುಸ್ತಕವನ್ನು ಮುಖ್ಯ ಶಿಕ್ಷಕರೇ ನಿರ್ವಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಸೇವಾ ಪುಸ್ತಕವನ್ನು ತೆರೆಯಬಾರದು. ಶೈಕ್ಷಣಿಕ ವರ್ಷದ ಅಂತ್ಯದಲ್ಲಿ ಅವರನ್ನು ಬಿಡುಗಡೆ ಮಾಡತಕ್ಕದ್ದು.
9) ಈಗಾಗಲೇ ನಿವೃತ್ತ ಶಿಕ್ಷಕರನ್ನು ನೇಮಕಾತಿ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿದ್ದಲ್ಲಿ ಇಂತಹ ಹುದ್ದೆಗಳಿಗೆ ಅತಿಥಿ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳಬಾರದು.
10) ಈ ರೀತಿ ನೇಮಕ ಮಾಡಲಾಗುವ ಶಿಕ್ಷಕರು ಅವರುಗಳು ಅತಿಥಿ ಶಿಕ್ಷಕರಾಗಿ ಸಲ್ಲಿಸುವ ಸೇವೆಯು ಇತರೆ ಯಾವುದೇ ಸರ್ಕಾರಿ ಸೇವಾ ಸಕ್ರಮಾತಿಗೆ ಪರಿಗಣಿಸತಕ್ಕದ್ದಲ್ಲ.
11) ಅತಿಥಿ ಶಿಕ್ಷಕರು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಿದ ವಿದ್ಯಾರ್ಹತೆ ಹೊಂದಿರಬೇಕು.
12) ಅತಿಥಿ ಶಿಕ್ಷಕರುಗಳನ್ನು ಸಂಬಂದಪಟ್ಟ ಸರ್ಕಾರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ನೇಮಕಾತಿ ಪ್ರಾಧಿಕಾರವೆಂದು ಗುರುತಿಸಿ ನೇಮಕಾತಿ ಮಾಡಿಕೊಳ್ಳಲು ಅಧಿಕಾರ ನೀಡಲಾಗಿದೆ. ಅವರು ಸ್ಥಳೀಯ ಅರ್ಹ ಶಿಕ್ಷಕರಿಗೆ ಆದ್ಯತೆ ನೀಡಿ, ಅವರಲ್ಲಿ ಮೆರಿಟ್ ಹೊಂದಿರುವವರನ್ನು ಆಯ್ಕೆ ಮಾಡುವುದು.
13) ಅತಿಥಿ ಶಿಕ್ಷಕರಿಗೆ ಪಾವತಿಸುವ ಗೌರವಧನವನ್ನು ಸಂಬಂಧಿಸಿದ ವೇತನ ಲೆಕ್ಕಶೀರ್ಷಿಕೆಯಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ:25.05.2009ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 741 ವೆಚ್ಚ–8/09 ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಸೇವಾ ನಿಯಮ) ಶಾಖೆಯು ದಿನಾಂಕ:06.05.2009ರ ಅನಧಿಕೃತ ಟಿಪ್ಪಣಿ ಸಂಖ್ಯೆ. ಸಿಆಸುಇ 191 ಸೇನಿಎ 2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1406

**ಹೆಚ್.ಟಿ. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರೌಢ ಶಿಕ್ಷಣ)

**ವಿಷಯ:** ಕೊಳ್ಳೇಗಾಲ ತಾಲ್ಲೂಕು, ಹನೂರು ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು ದಾನಿಗಳ ಹೆಸರಿನಲ್ಲಿ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಇಡಿ 51 ಯೋಯೋಕ 1989 ದಿನಾಂಕ:11.09.1989.

2) ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾ.ಶಿ.ಇ.23–ಯೋಜನೆ–1991–92 ದಿನಾಂಕ:21.04.2008.

**ಪ್ರಸ್ತಾವನೆ:–**

ಮೇಲೆ (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ ದಾನಕೊಟ್ಟ ಗಣ್ಯ ವ್ಯಕ್ತಿಗಳ ನಾಮಕರಣ ಮಾಡುವ ಬಗ್ಗೆ ಕೆಲವು ಷರತ್ತುಗಳೊಂದಿಗೆ ಅನುಮತಿ ನೀಡಿ ಆದೇಶಿಸಿದೆ.

(2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು, ಹನೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಸ್ವಂತ ಕಟ್ಟಡಕ್ಕಾಗಿ ಶ್ರೀ ವಿ. ಸಂಪಂಗಿರಾಮಯ್ಯನವರು ಹನೂರು ಹೋಬಳಿ ಹುಲ್ಲೇಪುರ ಗ್ರಾಮದ ದಾಖಲೆ ಆರ್.ಎಸ್.ದೊಡ್ಡಿ ಗ್ರಾಮದ ಸರ್ವೆ ನಂ.69/ಎ ಮತ್ತು 69/ಬಿ ರಲ್ಲಿನ ಜಮೀನನ್ನು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಹಾಗೂ ಕಾಲೇಜು ಅಭಿವೃದ್ಧಿ ಸಮಿತಿಯ ನಿರ್ಣಯ ಮತ್ತು ಪ್ರಾಂಶುಪಾಲರ ಅಭಿಪ್ರಾಯದಂತೆ ಸದರಿ ಕಾಲೇಜಿಗೆ **"ಶ್ರೀ ಜಿ.ವಿ.ಗೌಡ ಸ್ಮಾರಕ ಸರ್ಕಾರಿ ಪ್ರಥಮ ದರ್ಜೆ ಕಾಲೇಜು"** ಎಂದು ನಾಮಕರಣ ಮಾಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುವರು.

ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 148 ಯೋಸಕ 2008, ಬೆಂಗಳೂರು, ದಿನಾಂಕ: 28ನೇ ಮೇ 2009**

ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು, ಹನೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು **"ಶ್ರೀ ಜಿ.ವಿ.ಗೌಡ ಸ್ಮಾರಕ ಸರ್ಕಾರಿ ಪ್ರಥಮ ದರ್ಜೆ ಕಾಲೇಜು"** ಎಂದು ನಾಮಕರಣ ಮಾಡಲು ಸರ್ಕಾರದ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1408 **ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ಬೆಳಗಾವಿ ಜಿಲ್ಲೆ, ರಾಮದುರ್ಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು ದಾನಿಗಳ ಹೆಸರಿನಲ್ಲಿ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಇಡಿ 51 ಯೋಯೋಕ 1989 ದಿನಾಂಕ:11.09.1989.

2) ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾ.ಶಿ.ಇ.11–ಯೋಜನೆ–2007–08 ದಿನಾಂಕ:03.02.2009.

**ಪ್ರಸ್ತಾವನೆ:–**

ಮೇಲೆ (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ ದಾನಕೊಟ್ಟ ಗಣ್ಯ ವ್ಯಕ್ತಿಗಳ ನಾಮಕರಣ ಮಾಡುವ ಬಗ್ಗೆ ಕೆಲವು ಷರತ್ತುಗಳೊಂದಿಗೆ ಅನುಮತಿ ನೀಡಿ ಆದೇಶಿಸಿದೆ.

(2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು ಬೆಳಗಾಂ ಜಿಲ್ಲೆ, ರಾಮದುರ್ಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಸ್ವಂತ ಕಟ್ಟಡಕ್ಕಾಗಿ ಶ್ರೀ ಶೇಖರಪ್ಪ ಶಿವಲಿಂಗಪ್ಪ ಯಾದವಾಡ ಇವರು ಸರ್ವೆ ನಂ. 86/2ರಲ್ಲಿನ 3–00 ಎಕರೆ ಜಮೀನನ್ನು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ **"ಶ್ರೀಮತಿ ಈರಮ್ಮಾ ಕೋಂ ಶಿವಲಿಂಗಪ್ಪ ಯಾದವಾಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜು"** ಎಂದು ನಾಮಕರಣ ಮಾಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುವರು.

ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 148 ಯೋಸಕ 2008, ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಬೆಳಗಾಂ ಜಿಲ್ಲೆ, ರಾಮದುರ್ಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು **"ಶ್ರೀಮತಿ ಈರಮ್ಮಾ ಕೋಂ ಶಿವಲಿಂಗಪ್ಪ ಯಾದವಾಡ ಸರ್ಕಾರಿ ಪ್ರಥಂ ದರ್ಜೆ ಕಾಲೇಜು"** ಎಂದು ನಾಮಕರಣ ಮಾಡಲು ಸರ್ಕಾರದ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1488 **ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎನ್. ಶಿವಲಿಂಗಯ್ಯ ಪತ್ರಾಂಕಿತ ಆಪ್ತ ಸಹಾಯಕ, ಇವರ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಾಗಿರುವ ಪ್ರತಿಕೂಲ ಷರಾದ ಬಗ್ಗೆ.

**ಓದಲಾಗಿದೆ :** 1 ತಿಳುವಳಿಕೆ ಪತ್ರ ಸಂಖ್ಯೆ:ಸಿಆಸುಇ 07 ವಾರವ 2008 ದಿನಾಂಕ:30.4.2008

2. ನೌಕರರ ಮನವಿ ದಿನಾಂಕ:13.5.2008.
3. ಅರೆ ಸರ್ಕಾರಿ ಪತ್ರ ಸಂಖ್ಯೆ:ಸಿಆಸುಇ 07 ವಾರವ 2008 ದಿನಾಂಕ:18.8.2008 ಮತ್ತು 13.1.2009 .
4. ಶ್ರೀ ಎಸ್.ಎಂ. ಜಾಮದಾರ್, M.D., ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ : AIRIA(PS) ದಿನಾಂಕ:20.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:1ರ ತಿಳುವಳಿಕೆ ಪತ್ರದಲ್ಲಿ ಶ್ರೀ ಎನ್. ಶಿವಲಿಂಗಯ್ಯ, ಪತ್ರಾಂಕಿತ ಆಪ್ತ ಸಹಾಯಕ, ಇವರ 2004–05ನೇ ಸಾಲಿನ ಕಾರ್ಯನಿರ್ವಹಣಾ ವರದಿಯ ಭಾಗ–3 ರಲ್ಲಿ ಸಕ್ಷಮ ಪ್ರಾಧಿಕಾರವು ದಾಖಲಿಸಿರುವ ಈ ಕೆಳಕಂಡ ಪ್ರತಿಕೂಲ ಷರಾವನ್ನು ಕ.ನಾ.ಸೇ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು, 2000ರ ನಿಯಮ 9(2)ರಂತೆ ಸದರಿ ನೌಕರರಿಗೆ ತಿಳಿಸಲಾಗಿತ್ತು.

"Doubtful, on that count he was relieved and sent back to D.P.A.R."

ಮೇಲೆ ಓದಲಾದ ಕ್ರಮ ಸಂಖ್ಯೆ:(2)ರ ಮನವಿಯಲ್ಲಿ ಸದರಿ ನೌಕರರು 2004–05ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿನ ಪುನರಾವಲೋಕನ/ಅಂಗೀಕಾರ ಮಾಡುವ ಪ್ರಾಧಿಕಾರಿಗಳು ನಮೂದಿಸಿರುವ ಪ್ರತಿಕೂಲ ಷರಾಗಳು ಸರಿ ಇರುವುದಿಲ್ಲ. ಏಕೆಂದರೆ ಅಂದಿನ ಕಾರ್ಯದರ್ಶಿಗಳೇ ತಮ್ಮ ಮನವಿಯ ಮೇಲೆ ಅವರು ತಮ್ಮನ್ನು ಸಿ.ಆ.ಸು ಇಲಾಖೆಗೆ ಹಿಂದಿರುಗಿಸಲಾಗಿದೆಯೇ ಹೊರತು ಅವರ ಮೇಲ್ಕಂಡ ಅಭಿಪ್ರಾಯದಂತೆ ಅಲ್ಲ ಎಂದು ತಿಳಿಸುತ್ತಾ, ತಮ್ಮನ್ನು ಸ್ವತಃ ಮನವಿಯ ಮೇಲೆ ಅಂದಿನ ಕಾರ್ಯದರ್ಶಿಗಳು ಸಹಿ ಮಾಡಿ ತಮ್ಮ ಮನವಿಯನ್ನು ಸಿ.ಆ.ಸು. ಇಲಾಖೆಗೆ ಕಳುಹಿಸಲಾಗಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅರೆ ಸರ್ಕಾರಿ ಪತ್ರದಲ್ಲಿ ಕ.ನಾ.ಸೇ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳ ನಿಯಮ 10(2)ರ ಪ್ರಕಾರ ಹಾಗೂ ಸಿ.ಆ.ಸು ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 04 ಸೇರವ 2002 ದಿನಾಂಕ:29ನೇ ಆಗಸ್ಟ್ 2002 ರ ಸೂಚನೆ / ಸ್ಪಷ್ಟೀಕರಣ (18)ರನ್ವಯ ಸದರಿ ಪ್ರಕರಣದ ಸಕ್ಷಮ ಪ್ರಾಧಿಕಾರದ ಅಭಿಪ್ರಾಯವನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ:(4)ರ ಅರೆ ಸರ್ಕಾರಿ ಪತ್ರದಲ್ಲಿ ಪ್ರಕರಣದ ಸಕ್ಷಮ ಪ್ರಾಧಿಕಾರಿಗಳು ಅಂದರೆ ಅಂದಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಪ್ರಸ್ತುತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರು ಶ್ರೀ ಶಿವಲಿಂಗಯ್ಯ, ರವರ ಕೆಲವು ಅನಪೇಕ್ಷಿತ ಚಟುವಟಿಕೆಗಳು ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಕಂಡು ಬಂದ ಹಿನ್ನಲೆಯಲ್ಲಿ ಸದರಿಯವರ ಸೇವೆಯನ್ನು ಸಿ.ಆ.ಸು ಇಲಾಖೆಗೆ ಹಿಂದುರಿಗಿಸಲಾಗಿತ್ತು ಹಾಗೂ ತಾವು ಸದರಿ ನೌಕರರಿಗೆ ಕೂಡಲೇ ಶಾಖೆಯಿಂದ ತೆರಳುವುದು ಅಥವಾ ಅಮಾನತ್ತುಗೊಳ್ಳುವ ಆಯ್ಕೆ ನೀಡಲಾಗಿ, ಸದರಿ ನೌಕರ ಶಾಖೆಯಿಂದ ತೆರಳುವ ಆಯ್ಕೆ ಮಾಡಿಕೊಂಡಿರುತ್ತಾರೆ. ಆದ್ದರಿಂದ ಈ ಪ್ರತಿಕೂಲ ಷರಾವನ್ನು "ಪ್ರತಿಕೂಲ"ವೆಂದೇ ಪರಿಗಣಿಸುವಂತೆ ತಿಳಿಸಿರುತ್ತಾರೆ.

ಸದರಿ ಪ್ರಕರಣವನ್ನು ಕೂಲಂಕಷವಾಗಿ ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 07 ವಾರವ 2008 ದಿನಾಂಕ:12ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಾವಳಿಗಳು 2000ರ ನಿಯಮ 10(2)ರನ್ವಯ ಶ್ರೀ ಎನ್. ಶಿವಲಿಂಗಯ್ಯ, ಪತ್ರಾಂಕಿತ ಆಪ್ತ ಸಹಾಯಕ, ಕರ್ನಾಟಕ ಸರ್ಕಾರ ಸಚಿವಾಲಯ, ಇವರ 2004–05ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ಅಂಗೀಕಾರ ಪ್ರಾಧಿಕಾರ ದಾಖಲಿಸಿದ ಪ್ರತಿಕೂಲ ಷರಾ ಉಳಿದುಕೊಳ್ಳುತ್ತವೆ ಎಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಾಯ್ಸ್ ಸುರೇಂದ್ರ**

ಪಿ.ಆರ್. 617

ಸರ್ಕಾರದ ಜಂಟಿ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ),

**ವಿಷಯ :** ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಶಿವಮೊಗ್ಗದಲ್ಲಿ ತೆರೆಯುವ ಬಗ್ಗೆ.
ಆದೇಶ ಸಂಖ್ಯೆ:ಸಿಆಸುಇ 67 ಸೇಲೋಸೇ 2008, ಬೆಂಗಳೂರು, ದಿನಾಂಕ:20.1.2009.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 64 ಸೇಲೋಸೇ 93, ದಿನಾಂಕ:21.7.1994.

2. ಅಧ್ಯಕ್ಷರು ಕರ್ನಾಟಕ ಲೋಕ ಸೇವಾ ಆಯೋಗ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಆಡಳಿತ 976/08–09/ಪಿಎಸ್‌ಸಿ., ದಿನಾಂಕ:22.8.2008.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸಾರ್ವಜನಿಕರ ಹಾಗೂ ಅಭ್ಯರ್ಥಿಗಳ ಕೋರಿಕೆಯ ಮೇರೆಗೆ ಗುಲಬರ್ಗಾ, ಬೆಳಗಾಂ ಮತ್ತು ಮೈಸೂರು ನಗರಗಳಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಸ್ಥಾಪಿಸಲು ಅನುಮತಿ ನೀಡಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಶಿವಮೊಗ್ಗದಲ್ಲಿ ತೆರೆಯುವುದರಿಂದ, ಶಿವಮೊಗ್ಗ ಚಿಕ್ಕಮಗಳೂರು, ದಾವಣಗೆರೆ, ಚಿತ್ರದುರ್ಗ, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳ ಅಭ್ಯರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಪ್ರಯೋಜನ ಉಂಟಾಗಲಿದೆ ಎಂದು ಜೊತೆಗೆ ಮೇಲೆ ಸೂಚಿಸಿದ ಜಿಲ್ಲೆಗಳ ಅಭ್ಯರ್ಥಿಗಳು ಮೈಸೂರು ಪ್ರಾಂತೀಯ ಕಛೇರಿಯನ್ನು ಸಂಪರ್ಕಿಸುವುದನ್ನು ತಪ್ಪಿಸಬಹುದೆಂದು, ಲೋಕ ಸೇವಾ ಆಯೋಗವು ತಿಳಿಸುತ್ತಾ, ಶಿವಮೊಗ್ಗದಲ್ಲಿ ಆಯೋಗದ ಪ್ರಾಂತೀಯ ಕಛೇರಿಯನ್ನು ತೆರೆಯಲು ಹಾಗೂ ಅದರ ಕಾರ್ಯನಿರ್ವಹಣೆಗೆ ಸಹಾಯಕ ಕಾರ್ಯದರ್ಶಿ–1 ಶಾಖಾಧಿಕಾರಿ–1, ಸಹಾಯಕರು–1, ಕಿರಿಯ ಸಹಾಯಕರು–2, ಬೆರಳಚ್ಚುಗಾರರು–1 ಮತ್ತು ಗ್ರೂಪ್ 'ಡಿ' –2 ಒಟ್ಟು 8 ಹುದ್ದೆಗಳನ್ನು ಶೀಘ್ರವಾಗಿ ಮಂಜೂರು ಮಾಡುವಂತೆ ಆಯೋಗವು ಉಲ್ಲೇಖ (2)ರಲ್ಲಿನ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಲೋಕ ಸೇವಾ ಆಯೋಗದ ಪ್ರಸ್ತಾವನೆಯಂತೆ ಶಿವಮೊಗ್ಗದಲ್ಲಿ ಅದರ ಪ್ರಾಂತೀಯ ಕಛೇರಿಯನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ ಹಾಗೂ ಈ ಕಛೇರಿಗೆ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| | |
|---|---|
| ಗ್ರೂಪ್ 'ಎ' ಕಿರಿಯ ಶ್ರೇಣಿ– | |
| ಸಹಾಯಕ ಕಾರ್ಯದರ್ಶಿ | – 01 |
| **ಗ್ರೂಪ್ 'ಬಿ'** | |
| ಶಾಖಾಧಿಕಾರಿ | – 01 |
| **ಗ್ರೂಪ್'ಸಿ'** | |
| ಸಹಾಯಕರು | – 01 |
| ಕಿರಿಯ ಸಹಾಯಕರು | – 02 |
| ಬೆರಳಚ್ಚುಗಾರರು | – 01 |
| ಗ್ರೂಪ್ 'ಡಿ' | 02 |
| | 08 |

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ:ಆಇ 2113 ವೆಚ್ಚ 5/2008, ದಿನಾಂಕ:13.11.2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವರಾಜು**

ಪಿ.ಆರ್. 618 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು–1)

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ :** ರಾಜಾಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಾದ ಶ್ರೀ ಎನ್.ಎಸ್. ಸಂಗೋಳ್ಳಿ, ಇವರ ರಾಜೀನಾಮೆಯಿಂದ ತೆರವಾದ ಹುದ್ದೆಗೆ ಶ್ರೀ ಬೇಲೂರು ಜವರಯ್ಯ ಇವರನ್ನು ಉಳಿದ ಆಯೋಗದ ಕಾಲಾವಧಿಗೆ ಅಧ್ಯಕ್ಷರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 18 ಭಾನಿವಿ 2006, ದಿ:8.12.2006.

2. ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಾದ ಶ್ರೀ ಎನ್.ಎಸ್. ಸಂಗೋಳ್ಳಿರವರ ರಾಜೀನಾಮೆ ಪತ್ರ ದಿನಾಂಕ:31.1.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಾಭಾಷಾ (ವಿಧಾಯೀ) ಆಯೋಗವನ್ನು ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು ಇವರನ್ನು ಅಧ್ಯಕ್ಷರನ್ನಾಗಿ ನೇಮಿಸಿ, ರಚಿಸಲಾಗಿದೆ. ಸದರಿ ಆಯೋಗದ ಕಾರ್ಯಾವಧಿಯು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷಗಳವರೆಗೆ ಅಂದರೆ, ದಿನಾಂಕ:7.12.2009ರವರೆಗೆ ಆಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ರಾಜಾಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಾದ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು ಇವರು ದಿನಾಂಕ:31.1.2009ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಬೇಕೆಂದು ಕೋರಿರುತ್ತಾರೆ.

ಆದ್ದರಿಂದ ಸರ್ಕಾರವು ಕರ್ನಾಟಕ ರಾಜಾಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಾದ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು ಇವರ ರಾಜೀನಾಮೆಯನ್ನು ಅಂಗೀಕರಿಸಲು ಹಾಗೂ ಆಯೋಗದ ಕಾಲಾವಧಿಯು ದಿನಾಂಕ:7.12.2009ರವರೆಗೆ ಇರುವುದರಿಂದ ಆಯೋಗದ ಸದಸ್ಯರಾದ ಶ್ರೀ ಬೇಲೂರು ಜವರಯ್ಯ ಇವರನ್ನು ಅಧ್ಯಕ್ಷರನ್ನಾಗಿ ನೇಮಿಸಲು ನಿರ್ಣಯಿಸಲಾಗಿದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 2 ಭಾನಿವಿ 2009, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ 2009**

ರಾಜಾಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಾಗಿದ್ದ ಶ್ರೀ ಎನ್.ಎಸ್. ಸಂಗೊಳ್ಳಿರವರ ರಾಜೀನಾಮೆಯನ್ನು ದಿನಾಂಕ:31.1.2009ಕ್ಕೆ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 18 ಭಾನಿವಿ 2006, ದಿನಾಂಕ:8.12.2006ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಶ್ರೀ ಬೇಲೂರು ಜವರಯ್ಯ, ನಿವೃತ್ತ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಹಾಗೂ ಸದಸ್ಯರು ರಾಜಾಭಾಷಾ (ವಿಧಾಯೀ) ಆಯೋಗದ ಇನ್ನುಳಿದ ಕಾರ್ಯಾವಧಿ ಅಂದರೆ ದಿನಾಂಕ:1.2.2009ರಿಂದ ದಿನಾಂಕ:7.12.2009ರವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರಾಜಾಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ. ಆಯೋಗದ ಅಧ್ಯಕ್ಷರು ಮತ್ತು ಸರ್ಕಾರೇತರ ಸದಸ್ಯರುಗಳ ಸೇವಾ ಷರತ್ತುಗಳು ಪ್ರಸ್ತುತ ಜಾರಿಯಲ್ಲಿರುವ ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 18 ಭಾನಿವಿ 2006 ದಿನಾಂಕ:8.12.2006ರಲ್ಲಿ ನಿಗಧಿಪಡಿಸಿರುವಂತೆ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಶ್ರೀಧರ್**

ಪಿ.ಆರ್. 620

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಶ್ರೀ ಎಸ್.ಜಿ ಮಂಜುನಾಥಸಿಂಗ್ ಸಹಕಾರ ಅಧೀಕ್ಷಕರು (ಈಗ ಸಹಕಾರ ಅಭಿವೃದ್ಧಿ ಅಧಿಕಾರಿ) ಮತ್ತು ಶ್ರೀ ಬಿ. ಮಂಜುನಾಥನಾಯ್ಕ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಓ.ಓ.ಡಿ., ಭೂ ಅಭಿವೃದ್ಧಿ ಅಧಿಕಾರಿ (ಸಹಕಾರ) (ಈಗ ವ್ಯವಸ್ಥಾಪಕ ನಿರ್ದೇಶಕರು, DCC ಬ್ಯಾಂಕ್, ಚಿಕ್ಕಮಗಳೂರು) ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** ಕಾರಣ ಕೇಳುವ ನೋಟೀಸ್ ಸಂಖ್ಯೆ:ಭಕಾಶಿ:ಸಿಬ್ಬಂದಿ:2008–09:411, ದಿನಾಂಕ:4.8.2008.

**ಪ್ರಸ್ತಾವನೆ:**

2002–03, 2003–04 ಹಾಗೂ 2004–05ನೇ ಸಾಲಿನಲ್ಲಿ ಭದ್ರಾ ಕಾಡಾ, ಶಿವಮೊಗ್ಗ ಇಲ್ಲಿ ಶ್ರೀಮತಿ ಸರಸ್ವತಿಬಾಯಿ ಕೋಂ ಹರಿಶ್ಚಂದ್ರ, ದಾವಣಗೆರೆ ರವರು ಭದ್ರಾ ಕಾಡಾದ ವಿರುದ್ಧ ಹೂಡಿದ್ದ ರಿಟ್ ಪೆಟಿಷನ್ ನಂ. 33228/2003 ಮತ್ತು 36850/2003ಗಳಿಗೆ ಸಂಬಂಧಿಸಿದಂತೆ ಸೂಕ್ತ ಮಾಹಿತಿಯನ್ನು ಸಕಾಲಕ್ಕೆ ಸಂಬಂಧಿಸಿದವರಿಗೆ ಸರಿಯಾಗಿ ನೀಡದೇ ಆ ರಿಟ್ ಪೆಟಿಷನ್ ಪ್ರಕರಣದಲ್ಲಿ ಸರ್ಕಾರದ ತೀರ್ಮಾನಗಳಿಗೆ ವ್ಯತಿರಿಕ್ತವಾಗಿ ತೀರ್ಪು ಹೊರಬೀಳಲು ಕಾರಣವಾಗಿ, ಕರ್ತವ್ಯಚ್ಯುತಿ ಎಸಗಿರುವುದರಿಂದ ಹಾಗೂ ರಿಟ್ ಅರ್ಜಿದಾರರಿಗೆ ರೂ. 22,100/– ಗಳನ್ನು ಬಡ್ಡಿ ಸಮೇತ ನೀಡಬೇಕೆಂದು ಗೌರವಾನ್ವಿತ

ಉಚ್ಚ ನ್ಯಾಯಾಲಯವು ನಿರ್ದೇಶಿಸಿರುವುದರಿಂದ ಸರ್ಕಾರಕ್ಕೆ ರೂ. 28,308/–ಗಳ ನಷ್ಟಕ್ಕೆ ಕಾರಣರೆನ್ನಲಾದ ಶ್ರೀ ಎಸ್.ಜಿ. ಮಂಜುನಾಥಸಿಂಗ್, ಸಹಕಾರ ಅಧೀಕ್ಷಕರು ಮತ್ತು ಶ್ರೀ ಬಿ. ಮಂಜುನಾಥನಾಯ್ಕ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಓ.ಓ,ಡಿ., ಭೂ ಅಭಿವೃದ್ಧಿ ಅಧಿಕಾರಿ (ಸಹಕಾರ) ಇವರುಗಳಿಗೆ ದಿನಾಂಕ:4.8.2008ರ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ 30 ದಿನಗಳೊಳಗಾಗಿ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆಯೂ, ನಿಗಧಿತ ಕಾಲಾವಧಿಯಲ್ಲಿ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸದಿದ್ದಲ್ಲಿ, ಈ ಬಗ್ಗೆ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸುವುದಾಗಿ ತಿಳಿಸಲಾಗಿತ್ತು. ಇದುವರೆಗೂ ಇವರುಗಳು ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಇವರುಗಳು ಹೇಳಿಕೆ ಸಲ್ಲಿಸುವ ಅವಧಿ ಈಗಾಗಲೇ ಮುಗಿದಿರುವುದರಿಂದ ಇವರುಗಳು ಏನಾದರೂ ಹೇಳಿಕೆ ಸಲ್ಲಿಸುವ ಅಗತ್ಯವಿದ್ದಲ್ಲಿ ವಿಚಾರಣಾ ಸಮಯದಲ್ಲಿ ಸಲ್ಲಿಸಬಹುದಾಗಿದೆ ಆರೋಪಿತರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ ಅವರ ಹೇಳಿಕೆ ಏನೂ ಇಲ್ಲವೆಂದು ತೀರ್ಮಾನಿಸಿ, ಸದರಿ ಪ್ರಕರಣದಲ್ಲಿ ದಾಖಲೆಗಳ ಆಧಾರದ ಮೇಲೆ ಹಾಗೂ ಸಾಕ್ಷಿಗಳ ಸಮ್ಮುಖದಲ್ಲಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರೀಕ ಸೇವಾ (CCA) ನಿಯಮಾವಳಿಗಳು, 1957ರ ನಿಯಮ 11ರಡಿ ಹಾಗೂ ಅದೇ ನಿಯಮಾವಳಿಯ ನಿಯಮ 13ರನ್ನು ಓದುವುದರ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ರಾಮರಾವ್ ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ಸದರಿ ನಿಯಮದ ನಿಯಮ 11(2)ರನ್ವಯ ವಿಚಾರನಾಧಿಕಾರಿಯನ್ನಾಗಿ ಹಾಗೂ ಶ್ರೀ ಎ.ಪಿ. ಉಡುಪ, ಭೂ ಅಭಿವೃದ್ಧಿ ಅಧಿಕಾರಿ (ಸಹಕಾರ), ಭದ್ರಾ ಕಾಡಾ, ಶಿವಮೊಗ್ಗ ಇವರನ್ನು ಸದರಿ ನಿಯಮದ 11(5)ರನ್ವಯ ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲು ಸರ್ಕಾರ ನಿರ್ಧರಿಸಿ, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಜಸಂಇ 1 ಸಿಎಬಿ 2008, ಬೆಂಗಳೂರು, ದಿನಾಂಕ:9ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಎಸ್.ಜಿ. ಮಂಜುನಾಥಸಿಂಗ್, ಸಹಕಾರ ಅಧೀಕ್ಷಕರು (ಈಗ ಸಹಕಾರ ಅಭಿವೃದ್ಧಿ ಅಧಿಕಾರಿ) ಮತ್ತು ಶ್ರೀ ಬಿ. ಮಂಜುನಾಥನಾಯ್ಕ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಓ.ಓ.ಡಿ. ಭೂ ಅಭಿವೃದ್ಧಿ ಅಧಿಕಾರಿ (ಸಹಕಾರ) (ಈಗ ವ್ಯವಸ್ಥಾಪಕ ನಿರ್ದೇಶಕರು, DCC ಬ್ಯಾಂಕ್ , ಚಿಕ್ಕಮಗಳೂರು) ಇವರುಗಳ ವಿರುದ್ಧ ಮಾಡಲಾದ ಆರೋಪಗಳ ವಿರುದ್ಧ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಾಮರಾವ್ ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ನಂ. 20, ಬಿ–19ನೇ ಸಿ ಮೈನ್, 1ನೇ ಬ್ಲಾಕ್, ರಾಜಾಜಿನಗರ ಬೆಂಗಳೂರು–560010 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ, ವಿಚಾರಣಾಧಿಕಾರಿಯವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ:22:ಸೇಇವಿ:2007, ದಿನಾಂಕ11.4.2008ರಲ್ಲಿ ನಿಗಧಿಪಡಿಸಿರುವಂತೆ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರರಕಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎ.ಪಿ. ಉಡುಪ, ಭೂ ಅಭಿವೃದ್ಧಿ ಅಧಿಕಾರಿ (ಸಹಕಾರ), ಭದ್ರಾ ಕಾಡಾ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಆಡಳಿತಾಧಿಕಾರಿಗಳು, ಕಾಡಾ, ಭದ್ರಾ, ಶಿವಮೊಗ್ಗ ರವರು ಕ್ರಮ ಕೈಗೊಳ್ಳುವರು ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವೆಂಕಟೇಶ್**

ಪಿ.ಆರ್. 625

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಕಾಡಾ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 365 ಪಸಸೇ 2007, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2009**

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಪಶುಚಿಕಿತ್ಸಾಲಯದಿಂದ ಪಶು ಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿರುವ ಪಶುವೈದ್ಯಕೀಯ ಸಂಸ್ಥೆಗಳಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದೆಯಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 365 ಪಸಸೇ 2007, ದಿನಾಂಕ:18.8.2008.

2) ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಆಪಸಂ/ಡಿವಿಡಿ–3/ವಿವ–13/ಭಾಗ–2/2007–08, ದಿನಾಂಕ:19.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಆದೇಶದನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ 48 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ/ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಹಾಗೂ 15 ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಲು ಮಂಜೂರಾತಿ ನೀಡಿದೆ ಹಾಗೂ ಸದರಿ ಉನ್ನತೀಕರಣಕ್ಕೆ ಅಗತ್ಯವಿರುವ 48 ಪಶುವೈದ್ಯಾಧಿಕಾರಿ, 15 ಪಶುವೈದ್ಯಕೀಯ ಮೇಲ್ವಿಚಾರಕರು 15 ದ್ವಿತೀಯ ದರ್ಜೆ ಸಹಾಯಕರು ಹಾಗೂ 48 ಡಿ–ದರ್ಜೆ ಹುದ್ದೆಗಳನ್ನು ಸೃಜಿಸಲೂ ಸಹ ಅನುಮೋದನೆ ನೀಡಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸುವಾಗ ಹಾಲಿ ಇರುವ ಪಶುವೈದ್ಯಾಧಿಕಾರಿಗಳ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಉನ್ನತೀಕರಿಸಬೇಕಾಗಿದ್ದು, ದಿನಾಂಕ:18.8.2008ರ ಸರ್ಕಾರಿ ಆದೇಶದಲ್ಲಿ 15 ಹಾಲಿ ಇದ್ದ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸದಿದ್ದಲ್ಲಿ ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿದ ಉದ್ದೇಶ ಸಫಲವಾಗುವುದಿಲ್ಲ ಆದ್ದರಿಂದ ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿದ 15 ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಹಾಲಿ ಇರುವ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿ ತಿದ್ದುಪಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಹಾಗೂ ಪಶುವೈದ್ಯಕೀಯ ಸಂಸ್ಥೆಗಳ ಉನ್ನತೀಕರಣಕ್ಕಾಗಿ ನಿಗಧಿಪಡಿಸಿರುವ ಅನುದಾನದಲ್ಲಿಯೇ ಪಶುವೈದ್ಯಾಧಿಕಾರಿ ಹುದ್ದೆಗಳ ಉನ್ನತೀಕರಣ ವೆಚ್ಚವೂ ಒಳಗೊಂಡಿರುವುದರಿಂದ ಇದಕ್ಕಾಗಿ ಹೆಚ್ಚುವರಿ ಅನುದಾನದ ಅವಶ್ಯಕತೆ ಇರುವುದಿಲ್ಲವೆಂಬ ಅಂಶವನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ. Norms ಪ್ರಕಾರ ಪಶುಆಸ್ಪತ್ರೆಗಳಲ್ಲಿ ಸಹಾಯಕ ನಿರ್ದೇಶಕರ ಹುದ್ದೆ ಮಾತ್ರ ಇದ್ದು ಅಲ್ಲಿ ಪಶುವೈದ್ಯಾಧಿಕಾರಿ ಹುದ್ದೆ ಇರುವುದಿಲ್ಲವಾದರಿಂದ ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆ ಗಳನ್ನಾಗಿ ಉನ್ನತೀಕರಿಸಿದಾಗ ಅಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಯನ್ನೂ ಸಹ ಸಹಾಯಕ ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಸಬೇಕಾಗಿರುತ್ತದೆ.

3. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ ಉನ್ನತೀಕರಣದ ಉದ್ದೇಶ ಸಫಲಗೊಳಿಸಲು ಈಗಾಗಲೇ ದಿನಾಂಕ:18.8.2008ರನ್ವಯ ಪಶುಚಿಕಿತ್ಸಾಲಯದಿಂದ ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿರುವ 15 ಪಶುವೈದ್ಯಕೀಯ ಸಂಸ್ಥೆಗಳಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸಹಾಯಕ ನಿರ್ದೇಶಕರ ಹುದ್ದೆ ಪಶುಸಂಗೋಪನಾ ಇಲಾಖೆಯ ಮುಂದುವರೆದ ಕಾರ್ಯಕ್ರಮಗಳ ಅನ್ವಯ ಉನ್ನತೀಕರಿಸಲಾದ ಪಶುಆಸ್ಪತ್ರೆಗಳಿಗೆ ಮಂಜೂರಾದ ಹುದ್ದೆಗಳಾಗಿದ್ದು, Standard Staffing Pattern ಪ್ರಕಾರ ಪಶುಆಸ್ಪತ್ರೆಗಳಲ್ಲಿ ಸಹಾಯಕ ನಿರ್ದೇಶಕರ ದರ್ಜೆಯ ಅಧಿಕಾರಿಗಳು ಇರುವುದರಿಂದ ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 365 ಪಸಸೇ 2007, ದಿನಾಂಕ:18.8.2008ರಂತೆ ಉನ್ನತೀಕರಿಸಲಾದ 15 ಪಶುಆಸ್ಪತ್ರೆಗಳಿಗೆ ಮಂಜೂರಾಗಿರುವ 15 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಮಾತ್ರ ಸಹಾಯಕ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸಲು ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 667 ವೆಚ್ಚ 4/2007, ದಿನಾಂಕ:5.12.2008 ಹಾಗೂ ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ:ಪಿಡಿ 05 ಪಿಎಫ್‌ಓ 2008, ದಿನಾಂಕ:31.12.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ. ನಾಗರಾಜ**

ಪಿ.ಆರ್. 642

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

**PERSONNEL AND ADMINISTRATIVE REFORMS SECRETARIAT**

**CORRIGENDUM No DPAR 548 SAS 2008, Bangalore, Dated:5th February 2009**

In the Government Notification of even number dated 31st January 2009, in the last para, the following shall be inserted at the end-

"Consequently, Sri Anwar Pasha, IAS continues unni further orders as Deputy Commissioner, Chikkaballapura District".

By order and in the name of the Governor of Karnataka

**K.G. ANANTHA**

P.R. 674

Under Secretary to Government

Department of Personnel and Administrative Reforms (Services-I)

## ಶಿಕ್ಷಣ ಸಚಿವಾಲಯ

**ವಿಷಯ :** ದಿ:ಕರ್ನಲ್ ಜೋಜನ್ ಥಾಮಸ್ಸ್ ರವರ ಮಗಳು ಕು:ಮೇಘನ ಥಾಮಸ್ಸ್ ರವರು ಫಿಲಿಫೀನ್ಸ್‌ನ ಫ್ಲೈಟ್ ಲೈನ್ ಏವಿಯೇಶನ್‌ನಲ್ಲಿ ಕಮರ್ಷಿಯಲ್ ಪೈಲೇಟ್ ತರಬೇತಿ ಕಾರ್ಯಕ್ರಮಕ್ಕಾಗಿ ಪಡೆದಿರುವ ಸಾಲಕ್ಕೆ ಸಹಾಯಾನುದಾನವನ್ನು ಮಂಜೂರು ಮಾಡಿ ಅವರ ಬ್ಯಾಂಕಿನ ಖಾತೆಗೆ ಜಮಾ ಮಾಡುವ ಕುರಿತು.

**ಓದಲಾಗಿದೆ :** ದಿನಾಂಕ:10.11.2008ರ ಮಾನ್ಯ ರಾಜ್ಯಸಭಾ ಸಂಸತ್ ಸದಸ್ಯರಾದ ಶ್ರೀ ರಾಜೀವ್ ಚಂದ್ರಶೇಖರ್ ರವರ ಪತ್ರ.

**ಪ್ರಸ್ತಾವನೆ:**

1. ಮೇಲೆ ಓದಲಾದ ದಿನಾಂಕ:10.11.2008ರ ಪತ್ರದಲ್ಲಿ ಮಾನ್ಯ ರಾಜ್ಯಸಭಾ ಸಂಸತ್ ಸದಸ್ಯರಾದ ಶ್ರೀ ರಾಜೀವ್ ಚಂದ್ರಶೇಖರ್ ರವರು, ಬೆಂಗಳೂರು ನಿವಾಸಿಯಾದ ಕರ್ನಲ್ ಜೋಜನ್ ಥಾಮಸ್ಸ್‌ರವರು ದೇಶಕ್ಕೋಸ್ಕರ ಪ್ರಾಣತ್ಯಾಗ ಮಾಡಿರುತ್ತಾರೆ. ಅವರ ಮಗಳು ಕು:ಮೇಘನ ಥಾಮಸ್ಸ್‌ರವರು ಫಿಲಿಫಿನ್ಸ್‌ನ ಫ್ಲೈಟ್ ಲೈನ್ ಏವಿಯೇಶನ್‌ನಲ್ಲಿ ಕಮರ್ಷಿಯಲ್ ಪೈಲೇಟ್ ತರಬೇತಿ ಕಾರ್ಯಕ್ರಮಕ್ಕಾಗಿ ಬೆಂಗಳೂರಿನ ಚಂದ್ರಲೇಔಟ್‌ನಲ್ಲಿನ ಯುನಿಯನ್ ಬ್ಯಾಂಕ್ ಆಫ್ ಇಂಡಿಯಾದಿಂದ ಪಡೆದಿರುವ 13.60ಲಕ್ಷ ರೂ.ಗಳ ಸಾಲಕ್ಕೆ ಸಹಾಯಾನುದಾನವನ್ನು ಮಂಜೂರು ಮಾಡಿ ಶ್ರೀಮತಿ ಥಾಮಸ್ಸ್‌ರವರಿಗೆ ನೀಡುವಂತೆ ಕೋರಿರುತ್ತಾರೆ.

2. ಮಾನ್ಯ ರಾಜ್ಯಸಭಾ ಸಂಸತ್ ಸದಸ್ಯರಾದ ಶ್ರೀ ರಾಜೀವ್ ಚಂದ್ರಶೇಖರ್ ವರ ಕೋರಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 259 ಯೋಯೋಕ 2008, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ 2009**

**[ಇಡಿ 18 ಸ್ಪೀಮರ (ಯುನಿಕ್) 2009, ದಿನಾಂಕ 16–2–2009]**

3. ದಿ:ಕರ್ನ್‌ಲ್ ಜೋಜನ್ ಥಾಮಸ್ಸ್‌ರವರ ಮಗಳು ಕು:ಮೇಘನ ಥಾಮಸ್ಸ್ ರವರು ಪಿಲಿಫೀನ್ಸ್‌ನ ಫ್ಲೈಟ್‌ಲೈನ್ ಏವಿಯೇಶನ್‌ನಲ್ಲಿ ಕಮರ್ಷಿಯಲ್ ಪೈಲೇಟ್ ತರಬೇತಿ ಕಾರ್ಯಕ್ರಮಕ್ಕಾಗಿ ಬೆಂಗಳೂರಿನ ಚಂದ್ರಾಲೇಔಟ್‌ನಲ್ಲಿನ ಯುನಿಯನ್ ಬ್ಯಾಂಕ್ ಆಫ್ ಇಂಡಿಯಾದಿಂದ ಪಡೆದಿರುವ 13.60 ಲಕ್ಷ ರೂ. (ಹದಿಮೂರುಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳ ಸಾಲದಲ್ಲಿ 10.00ಲಕ್ಷ ರೂ. (ಹತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಒಂದು ಬಾರಿಯ ಸಹಾಯಾನುದಾನವಾಗಿ 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ "2202–03–800–1–09–106"ರ (ಯೋಜನೆ) ಅಡಿ ಒದಗಿಸಲಾಗಿರುವ 200.00 ಲಕ್ಷ ರೂ. (ಇನ್ನೂರು ಲಕ್ಷ ರೂಪಾಯಿಗಳು ಮಾತ್ರ)ಗಳ ಅನುದಾನದ ಮಿತಿಯಲ್ಲಿಯೇ ದಿ:ಕರ್ನಲ್ ಜೋಜನ್ ಥಾಮಸ್ಸ್ ರವರ ಮತ್ತು ಕು. ಮೇಘನ ಥಾಮಸ್ಸ್ ರವರ ಮೇಲ್ಕಂಡ ಬ್ಯಾಂಕಿನ ಸಾಲದ ಖಾತೆ ಸಂಖ್ಯೆ:563006550000011ಕ್ಕೆ ನೇರವಾಗಿ ಜಮಾ ಮಾಡಲು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಪರೀಕ್ಷಾ ಪ್ರಾಧಿಕಾರ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

4. ಈ ಆದೇಶವನ್ನು ದಿನಾಂಕ:15.1.2009, ಸಂಖ್ಯೆ:ಆಇ 1327 ವೆಚ್ಚ–8ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 678

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಸುಜಾತ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಿರವಾಳ, ಶಹಾಪುರ ತಾಲ್ಲೂಕು, ಗುಲ್ಬರ್ಗ ಜಿಲ್ಲೆ, ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ:ಜೆಆರ್‌ಓ (2ಎ) 66/2008–09 ದಿನಾಂಕ:26.11.2008.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ, ಡಾ:ಸುಜಾತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಿರವಾಳ, ಶಹಾಪುರ ತಾಲ್ಲೂಕು, ಗುಲ್ಬರ್ಗ ಜಿಲ್ಲೆ ಇವರು ಗುತ್ತಿಗೆ ಆಧಾರದಿಂದ ಸಕ್ರಮಗೊಂಡಿರುವ ವೈದ್ಯರಾಗಿದ್ದು, ತದನಂತರ ನೇರ ನೇಮಕಾತಿ ಮೂಲಕ

ಆಯ್ಕೆಗೊಂಡು ಸರ್ಕಾರದ ಆದೇಶ ಸಂಖ್ಯೆ:ಆಕುಕ 135 ಹೆಚ್ ಎಸ್ ಹೆಚ್ 2007(ಭಾ) ದಿನಾಂಕ:4.2.2008ರಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ, ಜಗಾಪುರ, ನರಗುಂದ ತಾಲ್ಲೂಕು, ಗದಗ ಜಿಲ್ಲೆ ಇಲ್ಲಿಗೆ ನೇಮಿಸಿದ್ದು, ಹಾಗೂ ಇಲ್ಲಿಯೇ ಕಾರ್ಯನಿರ್ವಹಿಸುತ್ತಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರ ಶಿರವಾಳ, ಶಹಾಪುರ ತಾಲ್ಲೂಕು, ಗುಲ್ಬರ್ಗ ಜಿಲ್ಲೆ ಈ ಹುದ್ದೆಗೆ ದಿನಾಂಕ:16.3.2008 ರಿಂದ ರಾಜೀನಾಮೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವಾದ್ದರಿಂದ ಸದರಿ ದಿನಾಂಕದಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 766 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ:18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ಸುಜಾತ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರು ನೇರ ನೇಮಕಾತಿ ಮೂಲಕ ಆಯ್ಕೆಗೊಂಡು ಸರ್ಕಾರದ ಆದೇಶ ಸಂಖ್ಯೆ:ಆಕುಕ 135 ಹೆಚ್‌ಎಸ್‌ಹೆಚ್ 2007 ದಿನಾಂಕ:4.2.2008ರಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ, ಜಗಾಪುರ, ನರಗುಂದ ತಾಲ್ಲೂಕು, ಗದಗ ಜಿಲ್ಲೆ ಇಲ್ಲಿಗೆ ನೇಮಿಸಿರುವುದರಿಂದ, ಈ ಹಿಂದೆ ಗುತ್ತಿಗೆ ಆಧಾರದಿಂದ ಸಕ್ರಮಗೊಂಡು ಕರ್ತವ್ಯ ನಿರ್ವಹಿಸುತ್ತಿದ್ದ ಪ್ರಾಥಮಿಕ ಆರೋಗ್ಯ ಕೇಂದ್ರ, ಶಿರವಾಳ, ಶಹಾಪುರ ತಾಲ್ಲೂಕು ಗುಲ್ಬರ್ಗ ಜಿಲ್ಲೆ ಈ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:16.3.2008 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 679 ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು–1)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ:ಸಿಐ 114 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ:9ನೇ ಜುಲೈ 2009**

**ವಿಷಯ :** ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ–2009–10ನೇ ಸಾಲಿಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ ಸಿಐ 114 ಎಸ್‌ಜಿಎಫ್ 2009 ದಿನಾಂಕ:1.7.2009ರ ಪುಟ1ರಲ್ಲಿರುವ ಆದೇಶ ಭಾಗದಲ್ಲಿನ ಲೆಕ್ಕ ಶೀರ್ಷಿಕೆ "2852–08–201–0–04" ಎಂಬುದನ್ನು ಲೆಕ್ಕ ಶೀರ್ಷಿಕೆ "2852–08–201–0–04 OE–059" ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದ್ ಕುಮಾರ್**

ಪಿ.ಆರ್. 1698 ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

## ಸೇರ್ಪಡೆ (Addendum)

**ಸಂಖ್ಯೆ:ಗ್ರಾಅಪ. 05 ಉಖಾಯೋ. 2008 (ಭಾಗ), ಬೆಂಗಳೂರು, ದಿನಾಂಕ:25ನೇ ಫೆಬ್ರವರಿ 2009**

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೆಲಸ ನಿರ್ವಹಿಸುವ ಕೂಲಿಕಾರರಿಗೆ 9 ಗಂಟೆ (ಒಂದು ಗಂಟೆ ವಿಶ್ರಾಂತಿ ಸೇರಿದಂತೆ) ಅವಧಿಗೆ ತೆಗೆದುಕೊಳ್ಳಬೇಕಾದ ಕಾಮಗಾರಿಗಳ ದರಪಟ್ಟಿಯನ್ನು ಮಾರ್ಪಡಿಸಿ ಅನುಮೋದನೆ ನೀಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ. 05. ಉಖಾಯೋ .2008, ಬೆಂಗಳೂರು, ದಿನಾಂಕ:2.1.2009.

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖದ ಸರ್ಕಾರದ ಆದೇಶದ ಅನುಬಂಧ–2 ರಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳ ಅಂದಾಜುಗಳಿಗೆ, ಕ್ರಮ ಸಂಖ್ಯೆ (4)ರಂತೆ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ವತಿಯಿಂದ, ತಾಂತ್ರಿಕ ಅನುಮೋದನೆ ಯನ್ನು ನೀಡುವ ಅಧಿಕಾರವನ್ನು ವಿವಿಧ ವೃಂದ ವರ್ಗಗಳ ಅಭಿಯಂತರರಿಗೆ ಪ್ರತ್ಯಾ ಯೋಜನೆ ಮಾಡಲಾಗುವುದರ ಜೊತೆಗೆ ಲೋಕೋಪಯೋಗಿ ಇಲಾಖೆ, ಜಲಸಂಪನ್ಮೂಲ

ಇಲಾಖೆ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಹಾಗೂ ಇನ್ನಿತರ ಇಲಾಖೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ವಿವಿಧ ವೃಂದದ ಅಭಿಯಂತರರುಗಳಿಗೆ, ಈ ಆದೇಶದಲ್ಲಿ ನೀಡಲಾಗಿರುವ ತಾಂತ್ರಿಕ ಅನುಮೋದನೆಯ ಅಧಿಕಾರವು ಅನ್ವಯಿಸುತ್ತದೆ. ಈ ಆದೇಶವು ತಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ:ಪಿ.ಸಿ. ಜಾಫರ್**

ಪಿ.ಆರ್. 696 ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**HOME SECRETARIAT**

**Sub :** Nomination of Representative of th e Department of Ex-servicemen Welfare, Ministry of Defenece for the Karnataka Rajya Sainik Board/Fund Meeting

**Read :** 1) D.O. Letter No. 3 KSB /US(I&C) 08D(Res), dated 12th Septemebr 2008 from the Secretary Department of Ex-servicemen Welfare Government of India, Ministry of Defence, New Delhi addressed t oChief Secretary to all states and union Territories

2) Letter No.DSWR/23/KRSB/94-2008 dated 30-9-2008 from the Director, Department of Sainik Welfare and Re-settlement Bangalore.

**Premble :**

The Secretary, Department of Ex-servicemen Welfare, Government of India Ministry of Defence, New Delhi vide lettter read at (1) above has mentioned that since a separate Deparment of Ex-Servicemen Welfare has been created in the Ministry of Defence in Septemebr 2004, in order to give a forcused attention towards the Welfare and Re-settlement of Ex-Servicemen, it is desired that a representative of the Department of Ex-servicemen Welfare, Ministry of Defence is also included for Rajya Sanik Board and other Fund Meeting Committees, Accordingly, the Director, Department of Sainik Welfare and Re-settlement, Bangalore vide his letter read at (2) above has requested the Government to include Joint Secretary, Department of Ex-servicemen Welfare, Ministry of Defence as its representative to participate In Karnataka Rajya Sainik Board and other Fund Committee Meetings conducted towards the welfare activities of Ex-service men and their departmetns in the State.

The proposal of the Director, Departmetn of Samik Welfare and Re-settlement has been examined by the Govrnment and hence the following order.

**Government order No. HD 89 KSS 2008, Bangalore Dated:9th Jnauary 2009**

Government is pleased to nominate the joint Secretary, Department Ex-servicemen Welfare, Ministry of Defence, Government of India as its representative to participate in Rajya Sainik Board/Fund Committee Meetings conducted towards, the Welfare and Re-settlement of Ex-servicemen and their depandents of Karnataka State with immediate effect till further orders.

By order and in the name of the Government of Karnataka

**G.R. SRINIVASARAO**

P.R. 595 I/c. Under Secretary to Government

Home Department (Police Auxiliary Services)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಜಿ. ರಮೇಶ್, ಹಿಂದಿನ ಆರ್.ಆರ್. ಶಿರಸ್ತೇದಾರ್, ತಾಲ್ಲೂಕು ಕಛೇರಿ, ತಿಪಟೂರು–ಪ್ರಸ್ತುತ ಉಪಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಮಡಿಕೇರಿ ಹಾಗೂ ಇತರ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ತುಮಕೂರು ಜಿಲ್ಲಾಧಿಕಾರಿಗಳ ಪತ್ರ ಸಂ:ಸಿಬ್ಬಂದಿ(1):ಸಿಸಿಎ:ಸಿಆರ್–7/2002–03, ದಿನಾಂಕ: 2.6.2005.
2) ಉಪ ವಿಭಾಗಾಧಿಕಾರಿಗಳು, ಮಧುಗಿರಿ ಉಪವಿಭಾಗ, ಮಧುಗಿರಿ ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ:23.4.2005.
3) ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ:30.8.2008.
4) ಶ್ರೀ ಜಿ. ರಮೇಶ್ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ:25.9.2008.

**ಪ್ರಸ್ತಾವನೆ:**

ತಿಪಟೂರು ತಾಲ್ಲೂಕು ನೆಲಗೊಂಡನಹಳ್ಳಿ ಗ್ರಾಮದ ಸ.ನಂ.2/2 ಮತ್ತು 6/2 ರ ಜಮೀನಿನ ಖಾತೆ ಬದಲಾವಣೆಯನ್ನು ತಮ್ಮ ಕಾರ್ಯಾಲಯದ ತಡೆ ಆಜ್ಞೆ ಇದ್ದರೂ ಸಹ ಮಾಡಿದ್ದಾರೆಂಬ ಹಿನ್ನಲೆಯಲ್ಲಿ ತಿಪಟೂರು ತಾಲ್ಲೂಕು ಕಛೇರಿಯಲ್ಲಿ ಹಿಂದೆ ಆರ್.ಆರ್. ಶಿರಸ್ತೇದಾರ್ ಆಗಿದ್ದ ಶ್ರೀ ಜೆ. ರಮೇಶ್, ಶ್ರೀ ಕೆ. ಮಲಯ್ಯ, ಪ್ರ.ದ.ಸ. ಮತ್ತು ಶ್ರೀ ಎಸ್. ರಾಜಣ್ಣ, ಗ್ರಾಮಲೆಕ್ಕಿಗರು, ಸಾರ್ಥವಳ್ಳಿ ವೃತ್ತ ಇವರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವನಿಮ) ನಿಯಮಾವಳಿ 1957ರ ನಿಯಮ 11(3) ರ ಅನ್ವಯ ಕಾರಣ ಕೇಳುವ ನೋಟೀಸು ನೀಡಲಾಗಿ ಮೇಲ್ಕಂಡ ಎಲ್ಲರೂ ಆರೋಪವನ್ನು ನಿರಾಕರಿಸಿದ ಹಿನ್ನಲೆಯಲ್ಲಿ ವಿಚಾರಣಾಧಿಕಾರಿಗಳನ್ನು ಮತ್ತು ಮಂಡನಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು ಎಂದು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಉಪವಿಭಾಗಾಧಿಕಾರಿಗಳು, ಮಧುಗಿರಿ ಉಪವಿಭಾಗ, ಮಧುಗಿರಿ ಮತ್ತು ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ಶ್ರೀ ಜಿ. ರಮೇಶ್ ಹಿಂದಿನ ಆರ್.ಆರ್. ಶಿರಸ್ತೇದಾರ್ ಮತ್ತು ಶ್ರೀ ಎಸ್. ರಾಜಣ್ಣ ಗ್ರಾಮಲೆಕ್ಕಿಗರು ಸಾರ್ಥವಳ್ಳಿ ವೃತ್ತ ಇರುಗಳ ವಿರುದ್ಧ ರೂಪಿಸಲಾಗಿದ್ದ ಆರೋಪಗಳನ್ನು ಸಾಬೀತು ಪಡಿಸಿದ್ದು, ಶ್ರೀ ಮಲ್ಲಯ್ಯ ಪ್ರ..ದ.ಸ ಇವರ ವಿರುದ್ಧ ರೂಪಿಸಲಾಗಿರುವ ಆರೋಪವನ್ನು ಸಾಬೀತು ಆಗಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಸದರಿ ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುವಂತೆ, ಶ್ರೀ ಜಿ. ರಮೇಶ್, ಹಿಂದಿನ ಆರ್.ಆರ್. ಶಿರಸ್ತೇದಾರ್, ಪ್ರಸ್ತುತ ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಮಡಿಕೇರಿ ಇವರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ ಸದರಿಯವರಿಗೆ ವಿಚಾರಣಾ ವರದಿಯೊಂದಿಗೆ ಮೇಲೆ ಓದಲಾದ ಕ್ರ.ಸಂ. (3) ದಿನಾಂಕ:30–8–2008ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಶ್ರೀ ಜಿ. ರಮೇಶ್, ತಹಶೀಲ್ದಾರ್ ಇವರು ದಿನಾಂಕ:25.9.2008ರಲ್ಲಿ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ತಮ್ಮ ವಿರುದ್ಧ 3 ಆರೋಪಗಳನ್ನು ಅಲ್ಲಗಳೆಯುತ್ತಾ ಸದರಿ ಆರೋಪಗಳಿಂದ ಮುಕ್ತನನ್ನಾಗಿ ಮಾಡುವಂತೆ ಮನವಿ ಮಾಡಿಕೊಂಡಿರುತ್ತಾರೆ.

ಶ್ರೀ ಜಿ. ರಮೇಶ್, ಹಿಂದಿನ ಆರ್.ಆರ್. ಶಿರಸ್ತೇದಾರ್, ತಾಲ್ಲೂಕು ಕಛೇರಿ, ತಿಪಟೂರು ಪ್ರಸ್ತುತ ತಹಶೀಲ್ದಾರ್ ಇವರು ಸಲ್ಲಿಸಿರುವ ಲಿಖಿತ ಸಮಜಾಯಿಷಿಯನ್ನು ಈ ಕೆಳಕಂಡಂತೆ ಪರಿಶೀಲಿಸಲಾಯಿತು.

**ಆಪಾದನೆ–1:** ತುಮಕೂರು ಜಿಲ್ಲೆ, ತಿಪಟೂರು ತಾಲ್ಲೂಕು, ಸಾರ್ಥವಳ್ಳಿ ಗ್ರಾಮದ ಸರ್ವೆ ನಂ:316/2 ವಗೈರೆ ಮತ್ತು ನೆಲಗೊಂಡನಹಳ್ಳಿ ಗ್ರಾಮದ ಸರ್ವೆ ನಂ. 6/2 ವಗೈರೆ ಜಮೀನುಗಳ ಖಾತೆ ಬದಲಾವಣೆ ವಿಚಾರದಲ್ಲಿ ತಿಪಟೂರು ಉಪವಿಭಾಗಾಧಿಕಾರಿಗಳು ತಮ್ಮ ನ್ಯಾಯಾಲಯದ ಆದೇಶ ಸಂಖ್ಯೆ:ಆರ್ ಎ/131/99–2000ರಲ್ಲಿ ದಿನಾಂಕ:28/6/2000ರಂದು ತಡೆಯಾಜ್ಞಾ ನೀಡಿದ್ದು. ತಡೆಯಾಜ್ಞಾ ಪಡೆದಿರುವ ಪೈಕಿ ಶ್ರೀಮತಿ ಚಂದ್ರಮ್ಮ ಕೋಂ ನಾರಾಯಣಾಚಾರ್ ಎಂಬುವವರು ನೋಂದಣಿ ಅಂಚೆ ಮೂಲಕ ಕಳುಹಿಸಿದ್ದು ದಿನಾಂಕ:29/6/2000 ರಂದು ತಾಲ್ಲೂಕು ಕಛೇರಿಯಲ್ಲಿ ಸ್ವೀಕರಿಸಿದ್ದು, ಈ ವಿಷಯ ಗಮನಕ್ಕೆ ಬಂದಿದ್ದರೂ ಶ್ರೀ ಸಿದ್ದಾಚಾರಿ ಅವರ ಮನವಿಯನ್ನು ಖುದ್ದಾಗಿ ಸ್ವೀಕರಿಸಿ ಖಾತೆ ಬದಲಾವಣೆ ಮಾಡಲು ರಾಜಸ್ವ ನಿರೀಕ್ಷಕರಿಗೆ ಅರ್ಜಿಯನ್ನು ರವಾನಿಸಿರುವ ಬಗ್ಗೆ ಇರುತ್ತದೆ.

ಗ್ರಾಮಲೆಕ್ಕಿಗರು ಈ ಸಂಬಂಧ ಖಾತೆ ಮಾಡಲು ಶಿಫಾರಸ್ಸು ಮಾಡಿ ಜವಾಬ್ದಾರಿಯುತ ಅಧಿಕಾರಿಗಳಾದ ಶಿರಸ್ತೇದಾರರು ತಡೆಯಾಜ್ಞೆ ಏನಾದರೂ ಇದೆಯೇ ಎಂಬುದನ್ನು ಪರಿಶೀಲಿಸದೇ ತರಾತುರಿಯಾಗಿ ದಿನಾಂಕ:24.7.2000 ರಂದು ಮುದ್ರಾಂಕ ಶುಲ್ಕ ಮತ್ತು ಹಕ್ಕು ಬದಲಾವಣೆ ಫೀ ವಿಧಿಸಿ ಖಾತೆ ಮತ್ತು ಪಹಣಿ ಆದೇಶಕ್ಕೆ ಮೇಲಾಧಿಕಾರಿಗಳಿಗೆ ಒಪ್ಪಿಸಿರುವುದು ಕರ್ತವ್ಯ ಲೋಪದಿಂದ ಕೂಡಿದೆ ಎಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ ಈ ಬಗ್ಗೆ ಆಪಾದಿತರು ತಾವು ಸಲ್ಲಿಸಿದ ಉತ್ತರದಲ್ಲಿ ಆರ್.ಆರ್.ಟಿಯಲ್ಲಿ ಸದರಿ ಪ್ರಕರಣ ತಡೆಯಾಜ್ಞೆ ಬಂದಿಲ್ಲದ ಪ್ರಯುಕ್ತ ಗ್ರಾಮ ಲೆಕ್ಕಿಗರು ಮ್ಯುಟೇಶನ್ ವಹಿಯಲ್ಲಿ ಮಂಡಿಸಿರುವಂತೆ ಪರಿಶೀಲಿಸಿ ಖಾತೆ ಬದಲಾವಣೆ ಮಾಡುವ ಬಗ್ಗೆ ತಹಶಿಲ್ದಾರರಿಗೆ ಕಳುಹಿಸಿದ್ದು ಇದರಲ್ಲಿ ತಮ್ಮ ತಪ್ಪು ಏನೂ ಇಲ್ಲವೆಂದು ತಿಳಿಸಿ ಈ ಪ್ರಕರಣದಿಂದ ಕೈಬಿಡುವಂತೆ ಕೋರಿರುತ್ತಾರೆ. ದಿನಾಂಕ:28.6.2000 ರಂದು ನೀಡಿದ

ತಡೆಯಾಜ್ಞೆಯು ಕಛೇರಿಯಲ್ಲಿ ದಿನಾಂಕ:29.6.2000ರಂದು ಸ್ವೀಕೃತವಾಗಿರುವುದರಿಂದ ಈ ವಿಷಯ ಶಿರಸ್ತೇದಾರರ ಗಮನಕ್ಕೆ ಬಂದಿಲ್ಲವೆಂದು ಹೇಳಿರುವುದನ್ನು ಒಪ್ಪಲಾಗುವುದಿಲ್ಲ ಆದುದರಿಂದ ಇವರ ವಿರುದ್ಧ ಹೊರಿಸಿರುವ ಆಪಾದನೆ ಸಾಭೀತಾಗಿದೆ.

**ಆಪಾದನೆ-2:** ತಿಪಟೂರು ತಾಲ್ಲೂಕು ಸಾರ್ಥವಳ್ಳಿ ಮತ್ತು ನೆಲಗೊಂಡನಹಳ್ಳಿ ಗ್ರಾಮದ ಎಂ.ಆರ್. /1/2000-01ಕ್ಕೆ ಸಮಬಂಧಿಸಿದಂತೆ ಖಾತೆ ಬದಲಾವಣೆ ಮಾಡಲು ಮುದ್ರಾಂಕ ಶುಲ್ಕ ರೂ. 1750/- ಮತ್ತು ಹಕ್ಕು ಬದಲಾವಣೆ ಶುಲ್ಕ ರೂ. 100/-ಗಳನ್ನು ಆಪಾದಿತರು ದಿನಾಂಕ:24.7.2000ರಂದು ವಿಧಿಸಿದ್ದು ಇದನ್ನು ದಿನಾಂಕ:18-9-2000ರಂದು ಬ್ಯಾಂಕಿಗೆ ಜಮೆ ಮಾಡಿರುವುದರಿಂದ ವಿಳಂಬವಾಗಿ ಜಮೆ ಮಾಡಿರುವ ಆಪಾದನೆ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ.

ಈ ಬಗ್ಗೆ ಆಪಾದಿತರು ಹೇಳಿಕೆ ಸಲ್ಲಿಸಿ ದಿನಾಂಕ:31.7.2000ರಂದು ತಾವೇ ಖುದ್ದಾಗಿ ತಡೆಯಾಜ್ಞೆ ಪತ್ರ ಪಡೆದು ದಿನಾಂಕ:18-9-2000 ರಂದು ಮುದ್ರಾಂಕ ಶುಲ್ಕವನ್ನು ತಾಲ್ಲೂಕು ಶಿರಸ್ತೇದಾರರಾದ ಶ್ರೀ ತಮ್ಮಯ್ಯ ರವರು ಪಾವತಿ ಮಾಡಿರುತ್ತಾರೆಂದು ತಿಳಿಸಿರುತ್ತಾರೆ ಆದರೆ ವಿಚಾರಣಾಧಿಕಾರಿಗಳು ದಿನಾಂಕ:31.7.2000 ರಂದು ತಡೆಯಾಜ್ಞೆ ಸ್ವೀಕರಿಸಿರುವ ಪೂರ್ವದಲ್ಲಿ ದಿನಾಂಕ:24.7.2000 ರಂದು ಮುದ್ರಾಂಕ ಶುಲ್ಕ ಮತ್ತು ಹಕ್ಕು ಬದಲಾವಣೆ ಫೀ ವಿಧಿಸಿದ್ದು ಇದನ್ನು ಬ್ಯಾಂಕಿಗೆ ಜಮೆ ಮಾಡಿಸಲು ಚಲನ್‌ಗೆ ಸಹಿ ಹಾಕಿಸದಿರುವುದು ಆಪಾದಿತರ ಕರ್ತವ್ಯಲೋಪ ಆಗಿರುತ್ತದೆಯೆಂದು ಅಭಿಪ್ರಾಯ ಪಟ್ಟಿರುತ್ತಾರೆ.

**ಆಪಾದನೆ:3** ಆಪಾದಿತ ನೌಕರರು ಜಿಲ್ಲಾಧಿಕಾರಿಗಳ ತಡೆಯಾಜ್ಞೆ ದಿನಾಂಕ:28.6.2000ರ ಪ್ರತಿಯನ್ನು ದಿನಾಂಕ:31.7.2000ರಂದು ಸ್ವೀಕರಿಸಿ ಆರ್.ಟಿ.ಸಿ. ಕಲಂ -11ರಲ್ಲಿ ದಾಖಲಿಸಿ ದಿನಾಂಕ:31.7.2000 ರಂದು ಕ್ರಮಾಂಕ ನೀಡಿ ರಾಜಸ್ವ ನಿರೀಕ್ಷಕರಿಗೆ ರವಾನಿಸಿರುತ್ತಾರೆ. ಆಯಾ ಗ್ರಾಮಗಳ ಎಂ.ಆರ್. ವಹಿಯಲ್ಲಿ ನೀಡಿರುವ ಸಂಖ್ಯೆಯಿಂದ ದಾಖಲಾಗಿರುವ ಬಗ್ಗೆ ಪರಿಶೀಲನೆ ನಡೆಸಿರುವುದಿಲ್ಲ ನೆಲಗೊಂಡನಹಳ್ಳಿ ಗ್ರಾಮದ ಎಂ.ಆರ್. 4/2000-01 ಮಾತ್ರ ದಾಖಲಾಗಿದ್ದು ಸಾರ್ಥನಹಳ್ಳಿ ಗ್ರಾಮದ ಎಂ.,ಆರ್. 3/2000-01 ದಾಖಲಾಗಿರುವುದಿಲ್ಲ ಆದರೂ 2 ಗ್ರಾಮಗಳ ವಿವಿಧ ಸರ್ವೆ ನಂ. 1, ಆರ್.ಟಿ.ಸಿ ಕಲಂ 11ರಲ್ಲಿ ತಡೆಯಾಜ್ಞೆ ದಾಖಲಾಗಿರುತ್ತದೆ ಆಪಾದಿತ ನೌಕರರು ಜಿಲ್ಲಾಧಿಕಾರಿಗಳ ತಡೆಯಾಜ್ಞೆ ಆದೇಶವನ್ನು ಗ್ರಾಮಗಳ ದಾಖಲೆಗಳಲ್ಲಿ ಕಾನೂನು ಚೌಕಟ್ಟಿನಲ್ಲಿ ದಾಖಲಿಸಲು ಯಾವುದೇ ಮುತುವರ್ಜಿ ವಹಿಸದೇ ಕರ್ತವ್ಯಲೋಪ ಎಸಗಿರುವ ಆಪಾದನೆ ಸಾಬಿತಾಗಿರುತ್ತದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ.

ಸದರಿ ಸಮಜಾಯಿಷಿಯ ಕುರಿತು ಹಾಗೂ ವಿಚಾರಣಾಧಿಕಾರಿಗಳು ಶ್ರೀ ಜಿ. ರಮೇಶ್ ತಹಶೀಲ್ದಾರ್ ಇವರ ವಿರುದ್ಧ ಮೂರು ಆರೋಪಗಳು ಸಾಬೀತಾಗಿದ್ದರೂ ಸಹಾ ಸರ್ಕಾರಕ್ಕೆ ಯಾವುದೇ ನಷ್ಟ ಆಗಿರುವುದಿಲ್ಲವೆಂದು ಸರ್ಕಾರವು ಮನಗಂಡು ಕರ್ತವ್ಯಲೊಪ ಎಸಗಿರುವುದು ಸಾಬೀತಾಗಿರುವುದರಿಂದ ಶ್ರೀ ಜಿ. ರಮೇಶ್, ತಹಶೀಲ್ದಾರ್, ಪ್ರಸ್ತುತ ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಮಡಿಕೇರಿ ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಹಾಗೂ ಈ ಪ್ರಕರಣದಲ್ಲಿ ಬಾಗಿಯಾಗಿರುವ ಶ್ರೀ ಮಲ್ಲಯ್ಯ ಪ್ರ.ದ.ಸ. ಇವರ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಲು ಹಾಗೂ ಶ್ರೀ ಎಸ್. ರಾಜಣ್ಣ, ಗ್ರಾಮಲೆಕ್ಕಿಗರು ಸಾರ್ಥಹಳ್ಳಿ ವೃತ್ತ ಇವರ ವಿರುದ್ಧ ಆರೋಪಗಳು ಸಾಬೀತಾಗಿದ್ದರೂ ಸಹ ಸದರಿ ನೌಕರರು ದಿನಾಂಕ:26.9.2004ರಂದು ಮರಣ ಹೊಂದಿರುವ ಕಾರಣ ಇವರನ್ನು ಸಹ ಆರೋಪದಿಂದ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್‌ಡಿ 48 ಎಡಿಇ 2005, ಬೆಂಗಳೂರು, ದಿನಾಂಕ:10ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಜಿ. ರಮೇಶ್, ಹಿಂದಿನ ಆರ್.ಆರ್. ಶಿರಸ್ತೇದಾರ್, ಪ್ರಸ್ತುತ ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಮಡಿಕೇರಿ ಇವರ ವಿರುದ್ಧದ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(iii)ರನ್ವಯ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ. ಹಾಗೂ ಶ್ರೀ ಮಲ್ಲಯ್ಯ ಪ್ರ.ದ.ಸ. ಇವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದ ಕಾರಣ ಸದರಿಯವರನ್ನು ಆರೋಪ ಮುಕ್ತರನ್ನಾಗಿ ಮತ್ತು ಶ್ರೀ ಎಸ್. ರಾಜಣ್ಣ, ಗ್ರಾಮಲೆಕ್ಕಿಗರು ಸಾರ್ಥಹಳ್ಳಿ ವೃತ್ತ ತಿಪಟೂರು ತಾಲ್ಲೂಕು ಇವರು ದಿನಾಂಕ: 26.9.2004 ರಂದು ಮರಣ ಹೊಂದಿರುವ ಇವರನ್ನು ಸಹ ಆರೋಪದಿಂದ ಮುಕ್ತರನ್ನಾಗಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 606

**ಬಿ.ವಿ ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

**ಮಾಹಿತಿ ತಂತ್ರಜ್ಞಾನ , ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2ನೇ ಹಂತದ ನಗರಗಳಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ರೂ. 5.00 ಕೋಟಿಗಳನ್ನು ಕಿಯೋನಿಕ್ಸ್ ಸಂಸ್ಥೆಗೆ ಇಕ್ವಿಟಿ ಮೊತ್ತವಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ :25.11.2008.
2. ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 59 ಎಂಡಿಎ 2008, ದಿನಾಂಕ :17.1.2009
3. ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್ ಪತ್ರಸಂಖ್ಯೆ ಕೆಎಸ್ಇಡಿಸಿ/ಎಂ.ಡಿ./2008–09, ದಿನಾಂಕ :13–1–2009.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಿಭಾಗಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಘೋಷಣೆಯನ್ನು ಮಾಡಲಾಗಿರುತ್ತದೆ.

> "ಹುಬ್ಬಳ್ಳಿ–ಧಾರವಾಡ, ಬೆಳಗಾವಿ, ಗುಲ್ಬರ್ಗಾ, ಶಿವಮೊಗ್ಗ, ದಾವಣಗೆರೆ, ಮಂಗಳೂರು ಮುಂತಾದ ನಗರಗಳಲ್ಲಿ ಖಾಸಗಿ ಸಹಭಾಗಿತ್ವದೊಡನೆ ಹಾಗೂ ಸರ್ಕಾರಿ ಸಂಸ್ಥೆಯಾದ ಕೆಐಎಡಿಬಿ ಜೊತೆಗೂಡಿ ಐಟಿಬಿಟಿ ಪಾರ್ಕ್‌ಗಳನ್ನು ಸ್ಥಾಪಿಸಲು ಉದ್ದೇಶಿಸಿದೆ. ಕಿಯೋನಿಕ್ಸ್ ಸಂಸ್ಥೆಯು ಈ ಸಂಬಂಧ ಸೂಕ್ತ ಕ್ರಮಗಳನ್ನು ಆರಂಭಿಸಲಿದ್ದು, ಈ ಉದ್ದೇಶಕ್ಕಾಗಿ 10 ಕೋಟಿ ರೂ.ಗಳ ಬಂಡವಾಳವನ್ನು ಒದಗಿಸಲಾಗಿದೆ".

ಅದರನ್ವಯ 2008–09ನೇ ಸಾಲಿನ ಆಯವ್ಯಯದಲ್ಲಿನ ಲೆಕ್ಕಶೀರ್ಷಿಕೆ "5465–01–190–1–13–ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು" ಅಡಿಯಲ್ಲಿ ರೂ. 1000.00 ಲಕ್ಷಗಳ ಒದಗಣೆ ಮಾಡಲಾಗಿದೆ.

ಮೇಲೆ [1]ರಲ್ಲಿ ಓದಲಾದ ದಿನಾಂಕ:25.11.2008ರ ಸರ್ಕಾರಿ ಆದೇಶದಲ್ಲಿ ಮೈಸೂರು ಮತ್ತು ಮಂಗಳೂರಿನಲ್ಲಿ ಐಟಿ. ಪಾರ್ಕ್‌ಗಳನ್ನು ಕಿಯೋನಿಕ್ಸ್‌ನ ಸ್ವಂತ ಬಂಡವಾಳ ಹಾಗೂ ಖಾಸಗಿ ಸಹಭಾಗಿತ್ವದ ಮಾದರಿಯಲ್ಲಿ [PPP Mode] ಒಟ್ಟು ರೂ. 31.68 ಕೋಟಿಗಳ ವೆಚ್ಚದಲ್ಲಿ ಸ್ಥಾಪಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ [2]ರಲ್ಲಿ ಓದಲಾದ ದಿನಾಂಕ:17.1.2009ರ ಸರ್ಕಾರಿ ಆದೇಶದಲ್ಲಿ ಭದ್ರಾವತಿ ಶಿವಮೊಗ್ಗ ರಾಷ್ಟ್ರೀಯ ಹೆದ್ದಾರಿ 206 ಮಾಚೇನಹಳ್ಳಿಯ ಗ್ರಾಮ, ಶಿವಮೊಗ್ಗದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಹಂಚಿಕೆ ಮಾಡಲ್ಪಟ್ಟ 33 ಎಕರೆ ಜಮೀನಿನ ಪೈಕಿ, 27.75 ಎಕರೆ ಜಮೀನಿನಲ್ಲಿ ರೂ., 1546.00 ಲಕ್ಷಗಳ [ಒಂದು ಸಾವಿರದಾ ಐದನೂರಾ ನಲವತ್ತಾರು ಲಕ್ಷಗಳು ಮಾತ್ರ] ಅಂದಾಜು ವೆಚ್ಚದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ನ್ನು ಖಾಸಗಿ ಪಾಲುದಾರರೊಂದಿಗೆ ಸ್ಥಾಪಿಸಲು ಕಿಯೋನಿಕ್ಸ್ ಸಂಸ್ಥೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ [3]ರಲ್ಲಿ ಓದಲಾದ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಮೇಲಿನ ಆದೇಶದಂತೆ ಮಂಗಳೂರು, ಮೈಸೂರು, ಶಿವಮೊಗ್ಗಾದಲ್ಲಿ ಐಟಿ ಪಾರ್ಕ್ ಸ್ಥಾಪಿಸುವುದಲ್ಲದೆ. ಬೆಳಗಾವಿ, ಗುಲ್ಬರ್ಗಾ, ದಾವಣಗೆರೆ ಮತ್ತು ಹುಬ್ಬಳ್ಳಿ–ಧಾರವಾಡಗಳಲ್ಲಿ ಐಟಿ ಪಾರ್ಕ್ ಸ್ಥಾಪನೆ ಮಾಡಲು ಕಿಯೋನಿಕ್ಸ್ ಸಂಸ್ಥೆಯು ಉದ್ದೇಶಿಸಿದ್ದು, ಈ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅನುವಾಗಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್ ನಲ್ಲಿ ಸಾಮ್ಯಷೇರು ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ –059–ಇತರೆ ಖರ್ಚು" ಅಡಿಯಲ್ಲಿ ಒದಗಿಸಿರುವ ರೂ. 10.00 ಕೋಟಿಗಳ ಈಕ್ವಿಟಿ ಹಣವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 38 ಎಂಡಿಎ 2008, ಬೆಂಗಳೂರು, ದಿನಾಂಕ:25ನೇ ಫೆಬ್ರವರಿ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2ನೇ ಹಂತದ ನಗರಗಳಾದಂತಹ ಮಂಗಳೂರು, ಮೈಸೂರು, ಶಿವಮೊಗ್ಗ ಬೆಳಗಾಂ, ದಾವಣಗೆರೆ ಹಾಗೂ ಹುಬ್ಬಳ್ಳಿ–ಧಾರವಾಡದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್ ನಲ್ಲಿ ಸಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ –059–ಇತರೆ ಖರ್ಚು' 'ಅಡಿಯಲ್ಲಿ ಒದಗಿಸಲಾಗಿರುವ ರೂ. 10.00 ಕೋಟಿ ಈಕ್ವಿಟಿ ಅನುದಾನದಲ್ಲಿ ರೂ. 5.00 ಕೋಟಿಗಳನ್ನು [ರೂ. ಐದು ಕೋಟಿಗಳು ಮಾತ್ರ] ಕಿಯೋನಿಕ್ಸ್ ಸಂಸ್ಥೆಗೆ ಇಕ್ವಿಟಿ

ಮೊತ್ತವಾಗಿ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

1. KEONICS should take an equity stake in the joint venture to be formed with a private partner, who should be selected through a competitive and transparent process.

2 The equity support provided to KEONICS is to enable them to borrow more funds for taking up large IT Infrastructure project and not for subsidizing the IT Units. Hence, the equity support to KEONICS should not be used for providing subsidy to units,

3 An appropriate debt and equity financing which avails benefit of the tax –shield and which enhances the project viability should be considered

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಾಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು" ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್ ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು..

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 26 ವೆಚ್ಚ–2/2009, ದಿನಾಂಕ:6.2.2009 ಇದರನ್ವಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 615

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ :ಯೋಇ 52 ಪಿಎಂಎಂ 2008 ದಿನಾಂಕ:6.8.2008

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2575–60–265–0–02–059 (ಯೋಜನೆ)" ಅಡಿಯಲ್ಲಿ ರೂ. 200.00ಕೋಟಿಗಳನ್ನು ಒದಗಿಸಲಾಗಿದ್ದು, ಅದರಲ್ಲಿ ಮೊದಲನೇ ಕಂತಾಗಿ 225 ವಿಧಾನಸಭೆ ಸದಸ್ಯರುಗಳಿಗೆ ತಲಾ ರೂ. 50.00ಲಕ್ಷಗಳಂತೆ ಒಟ್ಟು ರೂ. 11250.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಹಾಗೂ 70 ವಿಧಾನ ಪರಿಷತ್ ಸದಸ್ಯರುಗಳಿಗೆ ತಲಾ ರೂ. 50.00 ಲಕ್ಷಗಳಂತೆ ಒಟ್ಟು ರೂ. 3500.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಹೊಸದಾಗಿ ಆಯ್ಕೆಯಾಗಿರುವ 5 ಜನ ವಿಧಾನ ಪರಿಷತ್ ಸದಸ್ಯರುಗಳಿಗೆ ತಲಾ ರೂ. 50.00ಲಕ್ಷಗಳಂತೆ ಒಟ್ಟು ರೂ. 250.00ಲಕ್ಷಗಳನ್ನು ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 52 ಯೋವಿವಿ 2008 (ಪಿ) ಬೆಂಗಳೂರು, ದಿನಾಂಕ:19ನೇ ಫೆಬ್ರವರಿ 2009**

2008–09ನೇ ಸಾಲಿನ ಆಯವ್ಯಯದಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಗಾಗಿ ಲೆಕ್ಕಶೀರ್ಷಿಕೆ "2575–60–265–0–02–059 (ಯೋಜನೆ)" ಅಡಿಯಲ್ಲಿ ರೂ. 200.00 ಕೋಟಿಗಳನ್ನು ಒದಗಿಸಲಾಗಿದ್ದು ಈಗ ಈ ಮೊತ್ತದಲ್ಲಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಈ ಕೆಳಕಂಡ ಹೊಸದಾಗಿ ಆಯ್ಕೆಯಾದ 5 ವಿಧಾನ ಪರಿಷತ್ ಸದಸ್ಯರುಗಳಿಗೆ ತಲಾ

ರೂ. 50.00 ಲಕ್ಷಗಳಂತೆ ಒಟ್ಟು ರೂ. 250.00 ಲಕ್ಷಗಳನ್ನು (ಇನ್ನೂರೈವತ್ತು ಲಕ್ಷಗಳನ್ನು ಮಾತ್ರ) ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

| ಕ್ರ.ಸಂ | ವಿಧಾನಪರಿಷತ್ತಿನ ಸದಸ್ಯರುಗಳ ಹೆಸರು | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|---|
| 1 | ಶ್ರೀ ಮೇದಪ್ಪ ಎಸ್.ಜಿ | ಕೊಡಗು | 50.00 |
| 2 | ಶ್ರೀ ಶಶಿಕಾಂತ ಅಕ್ಕಪನಾಯ್ಕ | ಬೆಳಗಾಂ | 50.00 |
| 3 | ಶ್ರೀ ಶಿವರಾಜ ಸಜ್ಜನರ | ಧಾರವಾಡ | 50.00 |
| 4 | ಶ್ರೀ ಜಿ. ಎಂ. ಮದು ಮಾದೇಗೌಡ | ಮಂಡ್ಯ | 50.00 |
| 5 | ಶ್ರೀ ಎಸ್. ಕೈಲಾಸ್ | ಬೆಂಗಳೂರು ನಗರ | 50.00 |
| | | ಒಟ್ಟು | 250.00 |

(2) ಈ ಬಿಡುಗಡೆಯಾದ ಮೊತ್ತವನ್ನು ಸರ್ಕಾರದ ಪತ್ರ ಸಂಖ್ಯೆ:ಪಿಡಿ 250 ಪಿಎಂಎಂ 2002, ದಿನಾಂಕ:5.3.2002ರ ಪ್ರಕಾರ ಜಿಲ್ಲಾಧಿಕಾರಿಗಳ ವೈಯಕ್ತಿಕ ಖಾತೆ (ಪಿಡಿ ಅಕೌಂಟ್)ಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು.

(3) ಈ ಬಿಡುಗಡೆಯಾದ ಮೊತ್ತಕ್ಕೆ ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು ಸರ್ಕಾರದ ಆದೇಶ ಸಂಖ್ಯೆ:ಪಿಡಿ 486 ಪಿಎಂಎಂ 2001, ದಿನಾಂಕ:16.7.2001ರಲ್ಲಿ ಹಾಗೂ ತದನಂತರ ಹೊರಡಿಸಿದ ಪರಿಷ್ಕೃತ ಮಾರ್ಗಸೂಚಿಗಳಲ್ಲಿ ನೀಡಿರುವ ಸೂಚನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.

(4) ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು ಆಯಾ ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ ಹಾಗೂ ಬಿಡುಗಡೆ ಮಾಡಿದ ಅನುದಾನವನ್ನು ನಿಗದಿತ ಅವಧಿಯಲ್ಲಿ ಬಳಕೆ ಮಾಡಿಕೊಳ್ಳತಕ್ಕದ್ದು ಮುಂದಿನ ಕಂತಿನ ಹಣವನ್ನು ಬಿಡುಗಡೆ ಮಾಡಲಾಗುವುದಿಲ್ಲವೆಂದು ಸೂಚಿಸಿದೆ.

(5) ಮುಂದಿನ ಕಂತನ್ನು ಬಿಡುಗಡೆ ಮಾಡಲು ಈ ಕಂತಿನ ಅನುದಾನದ ಶೇಕಡ 50% ವೆಚ್ಚ ಮಾಡಿರಬೇಕು ಹಾಗೂ ಅನುಮೋದನೆಗೊಳ್ಳದ ಕಾಮಗಾರಿಗಳ ಮೊತ್ತವು ರೂ. 25.00 ಲಕ್ಷಕ್ಕಿಂತ ಕಡಿಮೆ ಇರಬೇಕು.

(6) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2575–60–265–0–059 ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

(7) ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 984 ವೆಚ್ಚ–7:2008: ದಿನಾಂಕ: 11/08/2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಪಿ.ಆರ್. 643 ಸರ್ಕಾರದ ಅಧೀನ ಕಾರ್ಯದರ್ಶಿ (1 ಮತ್ತು 2)

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಮೂರ್ತೆದಾರರ ಸಹಕಾರ ಸಂಘಗಳಿಗೆ ಆಡಿಟ್ ಫೀ ವಿನಾಯಿತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ:31:ಸಿಎಲ್ ಎಮ್ 2005 ದಿನಾಂಕ:2.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:2.12.2005ರ ಸರ್ಕಾರದ ಆದೇಶದಲ್ಲಿ ವಿವಿಧ ಪ್ರವರ್ಗಗಳ ಸಹಕಾರ ಸಂಘಗಳಿಗೆ ಲೆಕ್ಕಪರಿಶೋಧನಾ ಶುಲ್ಕ ಆಕರಣೆಯ ಬಗ್ಗೆ ಅನುಮತಿಯನ್ನು ನೀಡಲಾಗಿರುತ್ತದೆ. ಅದೇ ಆದೇಶದಲ್ಲಿ ವಿವರಿಸಿರುವಂತೆ ಕೆಲವು ಸಹಕಾರ ಸಂಘಗಳಿಗೆ ಲೆಕ್ಕಪರಿಶೋಧನಾ ಶುಲ್ಕ ಪಾವತಿಯಿಂದ ವಿನಾಯಿತಿ ಹಾಗೂ ಕೆಲವು ಸಹಕಾರ ಸಂಘಗಳಿಗೆ ಲೆಕ್ಕಪರಿಶೋಧನಾ ಶುಲ್ಕ ಪಾವತಿಯಲ್ಲಿ ರಿಯಾಯಿತಿ ನೀಡಲು ಅನುಮತಿಯನ್ನೂ ಸಹ ನೀಡಲಾಗಿರುತ್ತದೆ. ಅದರಂತೆ ಮೂರ್ತೆದಾರರ ಸಹಕಾರ ಸಂಘಗಳಿಗೂ ಕೂಡ ಲೆಕ್ಕಪರಿಶೋಧನಾ ಶುಲ್ಕ ಪಾವತಿಯಿಂದ ವಿನಾಯಿತಿ ನೀಡಬೇಕೆಂದು ಸರ್ಕಾರವು ತೀರ್ಮಾನಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 170 ಸಿಎಲ್ಎಂ 2008, ಬೆಂಗಳೂರು, ದಿನಾಂಕ:10ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ನಿಷ್ಕ್ರಿಯ/ಸ್ಥಗಿತಗೊಂಡ ಸಹಕಾರ ಸಂಘಗಳಿಗೆ ಮತ್ತು ಸಮಾಪನಾ ಹಂತದಲ್ಲಿರುವ ಸಹಕಾರ ಸಂಘಗಳಿಗೆ ಲೆಕ್ಕಪರಿಶೋಧನಾ ಶುಲ್ಕ ಆಕರಣೆಯಿಂದ ವಿನಾಯಿತಿ ನೀಡಿದಂತೆ, ಮೂರ್ತೆದಾರರ ಸಹಕಾರ ಸಂಘಗಳಿಗೂ ಕೂಡ ಲೆಕ್ಕಪರಿಶೋಧನಾ ಶುಲ್ಕ ಆಕರಣೆಯಿಂದ ವಿನಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 648

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಎಸ್.ಟಿ. ವಿಜಯಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ ವೈದ್ಯಕೀಯ ಕಾರಣಗಳ ಮೇಲೆ ಸಂಯುಕ್ತ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರ.ಮು.ಅ.ಸಂ. ಬೆಂಗಳೂರು ಇವರ ಪತ್ರ ಸಂಖ್ಯೆ:ಎ2–ಇಎಸ್‌ಟಿ–ಸಿಆರ್–112/2007–08, ದಿನಾಂಕ:24.9.2008.

**ಪ್ರಸ್ತಾವನೆ:**

ಶ್ರೀ ಎಸ್.ಟಿ. ವಿಜಯಕುಮಾರ್ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರು ಈ ಹಿಂದೆ ಸಹಾಯಕ ಅರಣ್ಯ ಕೃಷಿಕ, ಧಾರವಾಡದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:1.10.2007 ರಿಂದ 26.5.2008 ರವರೆಗೆ ಅನಾರೋಗ್ಯದ ಕಾರಣದಿಂದ ವೈದ್ಯಕೀಯ ರಜೆಯ ಮೇಲೆ ತೆರಳಿದ್ದು, ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸಿರುವುದರಿಂದ ದಿನಾಂಕ: 1.10.2007ರಿಂದ 11.11.2007ರವರೆಗೆ 42 ದಿನಗಳಿಗೆ ಅರ್ಧವೇತನ ರಜೆಯನ್ನು ಹಾಗೂ ದಿನಾಂಕ:12.11.2007 ರಿಂದ 26.5.2008 ರವರೆಗೆ 197 ದಿನಗಳಿಗೆ ಗಳಿಕೆ ರಜೆಯನ್ನು ಒಟ್ಟು 239 ದಿನಗಳ ಸಂಯುಕ್ತ ರಜೆಯನ್ನು ಮಂಜೂರು ಮಾಡಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಅಪಜೀ 218 ಅಪಸೇ 2008, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಶ್ರೀ ಎಸ್.ಟಿ. ವಿಜಯಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ ದಿನಾಂಕ:1.10.2007 ರಿಂದ 26.5.2007 ರವರೆಗಿನ ಅವಧಿಯನ್ನು ವೈದ್ಯಕೀಯ ಕಾರಣಗಳ ಮೇಲೆ ಒಟ್ಟು 239 ದಿನಗಳ ಸಂಯುಕ್ತ ರಜೆಯನ್ನು ಈ ಕೆಳಗಿನಂತೆ ಮಂಜೂರು ಮಾಡಿದೆ.

| | | |
|---|---|---|
| 1) | ದಿನಾಂಕ:1.10.2007 ರಿಂದ 11.11.2007 ರವರೆಗೆ | 42 ದಿನಗಳ ಅರ್ಧವೇತನ ರಜೆ |
| 2) | ದಿನಾಂಕ:12.11.2007 ರಿಂದ 26.5.2008 ರವರೆಗೆ | 197 ದಿನಗಳ ಗಳಿಕೆ ರಜೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಪಿ.ಆರ್. 652

ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

## URBAN DEVELOPMENT SECRETARIAT

**Sub :** Creation of 1 post of Deputy Director in Karnataka Municipal Reforms Cell-reg

**Read :**
1) Government Order No. UDD 25 PRJ 2005, dated :15.2.2005.
2) Government Order No. UDD 18 PRJ 2006, dated :31.1.2006.
3) Meting proceedings of 11 the meeting of Empowered Committee held on 5.12.2008

**Premble :**

The Government in its orders cited under reference 1 and 2 have accorded sanction for creation of posts under Karnataka Municipal Reforms Project in Municipal Reforms Cell under Directorate of Municipal Administration with the following posts:

| Sl. No | Name of the post | No. of Posts |
|---|---|---|
| 1 | Joint Director (Municipal Governance) | 1 |
| 2 | FBAS Co-ordinator | 1 |
| 3 | Deputy Director | 1 |
| 4 | Executive Engineers (SWM) | 1 |
| 5 | Assistant Executive Engineer | 1 |
| 6 | Officer Manager | 1 |
| 7 | Research Manager | 1 |
| 8 | System Analyst | 1 |
| 9 | Documentation Specialist | 1 |
| 10 | Stenographer | 2 |
| 11 | Assistant | 3 |
| 12 | Data Entry Operator | 3 |
| 13 | Group-D | 3 |
| | Total | 20 |

The Director, Directorate of Municipal Administration, has proposed to Empowered Committee for creation of 1 post of Deputy Directro to Municipal Reforms Cell under Directorate of Municipal Administration considering the quantum of work involved, The proposal of the Director has been approved by the Empowered Committee in its 11th meeting held on 5.12.2008 for creation of 1 post of Deputy Director in the pay scale of Rs .15,200-25,650, to be filled up officer of rank of K.A.S /K.M.A.S. Junior scale on deputation in lieu of existing vacant post of Executive Engineer (SWM) with a condition that the post will be co-terminus with the project.

Considering the ablve aspects, the Director, Directorate of Municipal Administration, has sent the proposal ti Government to accord sanction for creation of 1 post of Deputy Director in lieu of existing post of Executive Engineer (SWM). The proposal has been examined and the following order is issued.

**Government order No.UDD 13 BMS 2009, Bangalore Dated:29th January 2009**

In the circumstances explained above, sanction is accorded to creation of one post of Deputy Director under Karnataka Municipal Reforms Project in Municipal Reforms Cell under Directorate of Municipal Administration in the pay scale of Rs. 15,200-25,650 in lieu of existing vacant post of Executive Engineer (SWM), subject to the condition that the post will be co-terminus with the project This post shall be filled up by officer of rank of K.A.S./K.M.A.S. Junior scale on deputation.

This proposal in approved by the Empowered Committee for the World Bank Assisted Karnataka Municipal Reforms Project (KMRP), KUIDFC vide proceedings dated 5.12.2008.,

The expenditure for newly created post shall be met under the KMR Project fund.

By order and in the name of the Governor of Karnataka

**C.R. RAVINDRA**

P.R. 633

Under Secretary to Government

Urban Development Department

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಗೆ ಎರಡನೇ ಕಂತಿನ ರಾಜ್ಯದ ಅನುದಾನ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ :** ಕೇಂದ್ರ ಸರ್ಕಾರದ ಪತ್ರ ಸಂ/ಜೆ–12022/2/4/2008–ಎನ್.ಆರ್.ಇ.ಜಿ.ಎ.–ಎಸ್.ಎಲ್.ನಂ.501 ದಿ:7.1.2009

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ ಕೇಂದ್ರ ಸರ್ಕಾರವು ಬಳ್ಳಾರಿ ಜಿಲ್ಲೆಗೆ ರೂ. 441.80 ಲಕ್ಷಗಳನ್ನು ಎರಡನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10 ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ. 44.18 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ 121. ಉಖಾಯೋ. 08 ಬೆಂಗಳೂರು, ದಿನಾಂಕ:13ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಎರಡನೇ ಕಂತಿನ ಅನುದಾನವಾದ ರೂ. 44.18 ಲಕ್ಷಗಳನ್ನು (ರೂ. ನಲವತ್ತನಾಲ್ಕು ಲಕ್ಷ ಹದಿನೆಂಟು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬಳ್ಳಾರಿ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್ ಡಿ 7 ಜೆಡ್ಪಿಎ 2003 ದಿನಾಂಕ:14.7.2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಆ 07 ದಿನಾಂಕ:19.1.2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101–ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ–059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್‌ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007 ರಂದು ಅಧಿಸೂಚಿಸಿರುವ , ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಗ್ರಾಅಪ 48 ಪಿಬಿಎಸ್ 2008, ದಿನಾಂಕ:11.2.2009ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ:ಪಿ.ಸಿ ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ANNEXURE TO G.O. No:RDP; 121:NRE 2008, Bangalore Dated:13.2.2009**

Statement showing the releases of IInd installment of state share of funds under NREGA during 2008-09.

| Sl.No | District | Central share directly to ZP | | State share proposed for releases as per Column No. 4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 6 |
| 1 | Bellary | 7-1-2009 | 441.80 | 44.18 | 44.18 |

**Dr. P.C. JAFFER**
**Director,**
National Rural Employment Guarantee Scheme &
E/o Dy. Secretary to Government
Rural Development & Panchayat Raj Department

P.R. 638

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಗದಗ ಜಿಲ್ಲೆಗೆ ಎರಡನೇ ಕಂತಿನ ರಾಜ್ಯದ ಪಾಲನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ :** ಕೇಂದ್ರ ಸರ್ಕಾರದ ಪತ್ರದ ಸಂ/ಜೆ–12022/2/3/2008–ಎನ್.ಆರ್.ಇ.ಜಿ.ಎ.–ಎಸ್.ಎಲ್.ನಂ.500 ದಿ:7.1.2009

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ ಕೇಂದ್ರ ಸರ್ಕಾರವು ಗದಗ ಜಿಲ್ಲೆಗೆ ರೂ. 92.39 ಲಕ್ಷಗಳನ್ನು ಎರಡನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10 ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಗದಗ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ. 9.239 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ 155. ಉಖಾಯೋ. 08 ಬೆಂಗಳೂರು, ದಿನಾಂಕ:13ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಎರಡನೇ ಕಂತಿನ ಅನುದಾನವಾದ ರೂ. 9.239 ಲಕ್ಷಗಳನ್ನು (ರೂ. ಒಂಭತ್ತು ಲಕ್ಷ ಇಪ್ಪತ್ತೂಮ್ರು ಸಾವಿರದ ಒಂಬತ್ತ ನೂರು ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಗದಗ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ 7 ಜೆಡ್ಡಿಎ 2003 ದಿನಾಂಕ:14.7.2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಆ 07 ದಿನಾಂಕ:19.1.2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101–ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ–059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007 ರಂದು ಅಧಿಸೂಚಿಸಿರುವ , ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಗ್ರಾಅಪ 47 ಪಿಬಿಎಸ್ 2008, ದಿನಾಂಕ:11.2.2009ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ:ಪಿ.ಸಿ ಜಾಫರ್**
ನಿರ್ದೇಶಕರು
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ
ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ANNEXURE TO G.O. No:RDP; 155:NRE 2008, Bangalore Dated:13.2.2009**

Statement showing the releases of IInd installment of state share of funds under NREGA during 2008-09.

(Rs in lakhs)

| Sl.No | District | Central share directly to ZP | | State share proposed for releases as per Column No. 4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 6 |
| 1 | Gadag | 7-1-2009 | 92.39 | 9.239 | 9.239 |

**Dr. P.C. JAFFER**
Director,
National Rural Employment Guarantee Scheme &
E/o Dy. Secretary to Government
Rural Development & Panchayat Raj Department

P.R. 639

**ವಿಷಯ :** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ದಾವಣಗೆರೆ ಜಿಲ್ಲೆಯ 12 ಜೀತವಿಮುಕ್ತರಿಗೆ 2008–09ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಮಾಡುವ ಕುರಿತು

**ಉಲ್ಲೇಖ :** 1. ಸರ್ಕಾರದ ಆದೇಶ ಸಂ. ಗ್ರಾ.ಅ.ಪ 15 ಆರ್‌ಬಿಎಲ್. 2004 ದಿನಾಂಕ:21.1.2006.

2. ದಾವಣಗೆರೆ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಅ.ಸ.ಪತ್ರ ಸಂ.ಜಿ ಪಂದಾ:ಅಭಿ(3):ಇವಿ:ಸಿಆರ್:73/08–09 ದಿನಾಂಕ:26.11.08.

**ಪ್ರಸ್ತಾವನೆ:**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ: 21.1.2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ:21.1.2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ

ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನವನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ದಾವಣಗೆರೆ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ "ತಮಿಳುನಾಡು ರಾಜ್ಯದ ಕೃಷ್ಣಗಿರಿ ಜಿಲ್ಲೆ ಡೆಂಕಣಿಕೊಟ್ಟೈ ತಾಲ್ಲೂಕು ತಲ್ಲಿ ಬ್ಲಾಕ್ ಗುಮ್ಲಾಪುರಂ ಗ್ರಾಮದಲ್ಲಿ ಕಂಡು ಬಂದ ಕರ್ನಾಟಕ ರಾಜ್ಯದ ದಾವಣಗೆರೆ ಜಿಲ್ಲೆ ದಾವಣಗೆರೆ ತಾಲ್ಲೂಕು ಬಾಡ ಹಾಗೂ ಮತ್ತಿತರೆ ಗ್ರಾಮಕ್ಕೆ ಸೇರಿದ ಒಟ್ಟು 12 ಜೀತದಾಳುಗಳನ್ನು ಹೊಸೂರು ಉಪ ವಿಭಾಗೀಯ ದಂಡಾಧಿಕಾರಿಯು ಬಿಡುಗಡೆಗೊಳಿಸಿ ಜೀತವಿಮುಕ್ತ ಪ್ರಮಾಣಪತ್ರವನ್ನು ದಿನಾಂಕ:31.5.2008 ರಂದು ಹೊರಡಿಸಿರುವುದಾಗಿ" ತಿಳಿಸಿರುತ್ತಾರೆ. ಇದರಿಂದ, ಅವರುಗಳನ್ನು ಸ್ವಂತ ಸ್ಥಳವಾದ ದಾವಣಗೆರೆ ಜಿಲ್ಲೆಗೆ ಹಸ್ತಾಂತರಿಸಿರುವುದಾಗಿ ಕಂಡುಬರುತ್ತದೆ. ಆದುದರಿಂದ ದಾವಣಗೆರೆ ತಾಲ್ಲೂಕಿನ ಮೇಲ್ಕಂಡ 12 ಜೀತವಿಮುಕ್ತರುಗಳಿಗೆ ಈ ಯೋಜನೆಯಡಿ ಪ್ರಸಕ್ತ ಸಾಲಿನಲ್ಲಿ 2008 ಜೂನ್ ಮಾಹೆಯಿಂದ 2009 ಮಾರ್ಚಿ ಮಾಹೆಯವರೆಗಿನ ಒಟ್ಟು 10 ತಿಂಗಳ ಅವಧಿಗೆ ಮಾಹೆಯಾನ ರೂ. 300/– ರಂತೆ ಸಹಾಯಧನಕ್ಕಾಗಿ ತಗಲುವ ರೂ. 36000/– ಗಳ ಅನುದಾನವನ್ನು ದಾವಣಗೆರೆ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂ. ಗ್ರಾಅಪ 3 ಆರ್‌ಬಿಎಲ್ 2008, ಬೆಂಗಳೂರು,ದಿನಾಂಕ:9ನೇ ಫೆಬ್ರವರಿ 2009,**

ಜೀತಮಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲ್ಲೂಕಿನ 12 ಜೀತವಿಮುಕ್ತರುಗಳಿಗೆ 2008–09ನೇ ಸಾಲಿನ 10 ತಿಂಗಳ (2008 ಜೂನ್ ನಿಂದ 2009 ಮಾರ್ಚಿವರೆಗೆ) ಅವಧಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನ ಪಾವತಿಸಲು ಒಟ್ಟು ರೂ. 36000.00 (ಮೂವತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ದಾವಣಗೆರೆ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01 ಕಾರ್ಮಿಕ 198–ಗ್ರಾಮ ಪಂಚಾಯಿತಿಗಳಿಗೆ ಸಹಾಯಕ –6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

3. ಸರ್ಕಾರದ ಆದೇಶ ಸಂ.ಗ್ರಾಅಪ 15 ಆರ್‌ಬಿಎಲ್ 2004, ದಿನಾಂಕ:21.1.2006 ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 39 ಪಿಬಿಎಸ್ 2009 ದಿನಾಂಕ:4.2.2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ:ಪಿ.ಸಿ ಜಾಫರ್**

ಪಿ.ಆರ್. 640

ನಿರ್ದೇಶಕರು

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ ಹಾಗೂ ಪದನಿಮಿತ್ತ

ಸರ್ಕಾರದ ಉಪಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು ಎಂ.ಎಂ. ಆಕ್ಟೀವ್ ಬೆಂಗಳೂರು ಐಟಿ ಬಿಜ್ 2008 ರವರ ಪತ್ರ ದಿನಾಂಕ:1–1–2009.

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು ಎಂ.ಎಂ. ಆಕ್ಟೀವ್ ಐಟಿ ಬಿಜ್ 2008 ರವರ ಪತ್ರ ದಿನಾಂಕ:1–1–2009ರಲ್ಲಿ ವಿವರಿಸಿರುವಂತೆ ಬೆಂಗಳೂರು ಐಟಿ ಬಿಜ್ 2008 ಸಮ್ಮೇಳನಕ್ಕೆ ಒಟ್ಟು ರೂ. 3,42,59,442/–ಗಳ ವೆಚ್ಚವಾಗಿದ್ದು, ಆದಾಯವು ರೂ. 2,56,66,658/– ಬಂದಿದ್ದು, ರೂ, 85,92,784/– ಮತ್ತು ಕೊರತೆಯಾಗಿದೆ ಎಂದು ವರದಿ ಮಾಡಿದ್ದು, ಅದರಲ್ಲಿ ಕೊರತೆಯಾದ ರೂ. 75.00 ಲಕ್ಷಗಳ ಮೊತ್ತವನ್ನು ವ್ಯವಸ್ಥಾಪಕ ನಿರ್ದೇಶಕರು ಎಸ್‌ಟಿಪಿಐ ಬೆಂಗಳೂರು ಇವರ ಮೂಲಕ ವ್ಯವಸ್ಥಾಪಕ ನಿರ್ದೇಶಕರು ಎಂ.ಎಂ.ಆಕ್ಟೀವ್ ಐಟಿ ಬಿಜ್ 2008ರವರಿಗೆ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 81 ಅಡವಿ 2008[ಪಿ], ಬೆಂಗಳೂರು, ದಿನಾಂಕ:21ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕ್ಷೇತ್ರಗಳ ಉನ್ನತೀಕರಣ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ, ಹಮ್ಮಿಕೊಂಡಿರುವ ಕಾರ್ಯಚಟುವಟಿಕೆಗಳಿಗಾಗಿ ಬೆಂಗಳೂರು ಐಟಿ ಬಿಜ್ 2008 ಸಮ್ಮೇಳನಕ್ಕೆ ಕೊರತೆಯಾದ ಮೊತ್ತ ರೂ. 75.00 ಲಕ್ಷ [ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ] ಅನುದಾನವನ್ನು ವ್ಯವಸ್ಥಾಪಕ ನಿರ್ದೇಶಕರು, ಎಸ್‌ಟಿಪಿಐ, ಬೆಂಗಳೂರು ಇವರ ಮೂಲಕ ವ್ಯವಸ್ಥಾಪಕ ನಿರ್ದೇಶಕರು ಎಂ.ಎಂ. ಆಕ್ಟೀವ್ ಐಟಿ ಬಿಜ್ 2008ರವರಿಗೆ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವ್ಯವಸ್ಥಾಪಕ ನಿರ್ದೇಶಕರು, ಎಸ್‌ಟಿಪಿಐ., ಬೆಂಗಳೂರುರವರ ಮೂಲಕ ವ್ಯವಸ್ಥಾಪಕ ನಿರ್ದೇಶಕರು ಎಂ.ಎಂ. ಆಕ್ಟೀವ್ ಐಟಿ ಬಿಜ್ 2008 ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು ಎಂ.ಎಂ. ಆಕ್ಟೀವ್ ಐಟಿ ಬಿಜ್ 2008 ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 681 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ :** 2008–09ನೇ ಸಾಲಿಗೆ ಕಿಯೊನಿಕ್ಸ್ ಸಂಸ್ಥೆಗೆ ಹುಬ್ಬಳ್ಳಿಯ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 24 ಆಡವಿ 2008 ದಿನಾಂಕ :12.6.08,
2. ನಿರ್ದೇಶಕರು [ಆಪರೇಷನ್] ಕಿಯೋನಿಕ್ಸ್ ರವರ ಪತ್ರ ಸಂ : KSEDC /INFRA/ITPH/08-09, ದಿನಾಂಕ :30–6–2008.
3. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 37 ಆಡವಿ 2008 ದಿನಾಂಕ :11.7.08

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–01 ಮಾತಂ–ಉನ್ನತೀಕರಣ & ಅಭಿವೃದ್ಧಿ 059 ಇತರೆ ಖರ್ಚು [ಯೋಜನೆ]' ರಡಿಯಲ್ಲಿ ರೂ. 600.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಅದರಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಕಿಯೋನಿಕ್ಸ್ ಸಂಸ್ಥೆಗೆ ರೂ. 30.00 ಲಕ್ಷ [ರೂ. ಮೂವತ್ತು ಲಕ್ಷಗಳು ಮಾತ್ರ] ಗಳ ಅನುದಾನವನ್ನು ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ನಿರ್ದೇಶಕರು [ಆಪರೇಷನ್] ಕಿಯೋನಿಕ್ಸ್ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ:30–6–2008ರ ಪತ್ರದಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಮೇಲೆ [1]ರಲ್ಲಿನ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾಗಿರುವ ರೂ. 30.00 ಲಕ್ಷಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಮೇಲೆ [3]ರಲ್ಲಿ ಓದಲಾದ ದಿನಾಂಕ:11–7–2008 ರ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿಗೆ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ರೂ. 10.00 ಲಕ್ಷಗಳ ಅನುದಾನವನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತಕ್ಕೆ [ಕಿಯೋನಿಕ್ಸ್] ಸರ್ಕಾರದಿಂದ ಈಗಾಗಲೇ ಬಿಡುಗಡೆ ಮಾಡಲಾಗಿದೆ. ಉಳಿದ ರೂ. 20.00 ಲಕ್ಷಗಳ ಅನುದಾನವನ್ನು ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 37 ಅಡವಿ 2008, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2008–09ನೇ ಸಾಲಿಗೆ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಹಂಚಿಕೆಯಾದ ರೂ. 30.00 ಲಕ್ಷಗಳ ಅನುದಾನದಲ್ಲಿ ಉಳಿದ ರೂ. 20.00 ಲಕ್ಷಗಳ [ಇಪ್ಪತ್ತು ಲಕ್ಷ ರೂ.ಗಳು ಮಾತ್ರ] ಅನುದಾನವನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತಕ್ಕೆ [ಕಿಯೋನಿಕ್ಸ್] ನೀಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ರಾಜ್ಯ ವಿದ್ಯನ್ಮಾನ ಅಭಿವೃದ್ಧಿ ನಿಗಮ ನಿಯಮಿತ, ಸಂಸ್ಥೆಯ ನಿರ್ದೇಶಕರು [ನಿರ್ವಹಣೆ]ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು..

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 682

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದರ ಅವ್ಯವಹಾರಗಳ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು) ಇವರ ಪತ್ರ ಸಂಖ್ಯೆ:ಸಿಆರ್‌ಡಿ/33/ಸಿಎಬಿ–1/2008–09, ದಿನಾಂಕ:17.1.2009.

**ಪ್ರಸ್ತಾವನೆ:**

ಕೆ.ಸಿ.ಸಿ. ಬ್ಯಾಂಕ್ ನಿಯಮಿತ ಧಾರವಾಡ ಇದರಲ್ಲಿ ನಡೆದಿರುವ ಅವ್ಯವಹಾರಗಳ ಮತ್ತು ನಷ್ಟಗಳ ಬಗ್ಗೆ ಸತ್ಯಾಂಶವನ್ನು ಪತ್ತೆ ಮಾಡಿ ಅವ್ಯವಹಾರಗಳ ಮತ್ತು ನಷ್ಟಗಳ ಜವಾಬ್ದಾರಿಯನ್ನು ನಿಗಧಿಪಡಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರಡಿ ವಿಚಾರಣೆ ನಡೆಸಲು ದಿನಾಂಕ:19.8.2005ರಂದು ವಿಚಾರಣಾಧಿಕಾರಿಯನ್ನು ನೇಮಿಸಲಾಗಿದ್ದು ವಿಚಾರಣಾಧಿಕಾರಿಯು ಆಗಿಂದಾಗ್ಗೆ ವರ್ಗಾವಣೆ ಹೊಂದಿರುವ ಪ್ರಯುಕ್ತ ವಿಚಾರಣೆಯನ್ನು ನಿಗಧಿತ ಸಮಯದಲ್ಲಿ ಮುಕ್ತಾಯಗೊಳಿಸಿ ವರದಿ ಸಲ್ಲಿಸಲು ಸಾಧ್ಯವಾಗದಿರುವುದರಿಂದ ಪ್ರಸ್ತುತ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕರಾದ ಶ್ರೀ ರತ್ನಾನಾಯಕ್ ಇವರು ವಿಚಾರಣಾಧಿಕಾರಿಯಾಗಿ ನೇಮಕವಾಗಿರುತ್ತದೆ. ವಿಚಾರಣೆಯನ್ನು ಶೀಘ್ರವಾಗಿ ಮುಕ್ತಾಯಗೊಳಿಸಲು ಸದರಿ ವಿಚಾರಣಾಧಿಕಾರಿಯವರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿ ವಿಸ್ತರಣೆ ಮಾಡಲು ದಿನಾಂಕ:31.3.2009ರ ವರೆಗೆ ವಿಸ್ತರಿಸಲು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 10 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ 2009**

ಕೆ.ಸಿ.ಸಿ. ಬ್ಯಾಂಕ್ ನಿಯಮಿತ, ಧಾರವಾಡ ಇದರ ಪ್ರರಕಣ 64ರ ವಿಚಾರಣೆಯ ಅವಧಿಯನ್ನು ದಿನಾಂಕ:18.2.2007ರಿಂದ ದಿನಾಂಕ:31.3.2009ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ

ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 64(2–ಎ)ಗೆ ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೆ.ಸಿ.ಸಿ. ಬ್ಯಾಂಕ್ ನಿಯಮಿತ, ಧಾರವಾಡ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ)ಗೆ ಮಾರ್ಪಾಡು ಮಾಡಿ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಮೂವತ್ತೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

2) ಪ್ರಕರಣ 64 ಉಪ–ಪ್ರಕರಣ (2–ಎ) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:31.3.2009ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64ರ ಉಪ–ಪ್ರಕರಣ (2–ಎ) ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

3) ದಿನಾಂಕ:31.3.2009 ರೊಳಗೆ ವಿಚಾರಣೆಯನ್ನು ಮುಕ್ತಾಯಗೊಳಿಸತಕ್ಕದ್ದು. ಯಾವುದೇ ಕಾರಣಕ್ಕೂ ಮತ್ತೊಮ್ಮೆ ವಿಚಾರಣೆಯ ಅವಧಿಯ ವಿಸ್ತರಣೆಗೆ ಪ್ರಸ್ತಾವ ಸಲ್ಲಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 700

**ಕಂದಾಯ ಸಚಿವಾಲಯ**

**ವಿಷಯ :** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ 400 ಭೂಮಾಪಕರ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ರವರ ಅರೆ ಸರ್ಕಾರಿ ಪತ್ರ ಸಂ. ಇಎಸ್‌ಟಿ. ಎಂಎಸ್ ಸಿ. 177/2007–08 ದಿನಾಂಕ:23.12.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:23.12.2008ರ ಪತ್ರದಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ರವರು ತಮ್ಮ ಇಲಾಖೆಯಲ್ಲಿ ಪ್ರಸ್ತುತ 300 ಪ್ರಥಮ ದರ್ಜೆ ಭೂಮಾಪಕರು ಹಾಗೂ 2110 ದ್ವಿತೀಯ ದರ್ಜೆ ಭೂಮಾಪಕರು ಹುದ್ದೆಗಳು ಇದ್ದು ಅವುಗಳ ಪೈಕಿ ಹಾಲಿ 300 ಪ್ರಥಮ ದರ್ಜೆ ಭೂಮಾಪಕರ ಹಾಗೂ 1571 ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗಳನ್ನು ಭರ್ತಿ ಮಾಡಲಾಗಿದೆ. ಅಲ್ಲದೇ 199 ತಪಾಸಕರ ಹುದ್ದೆಗಳು ಇದ್ದು ಅವುಗಳನ್ನು ಬಡ್ತಿಯ ಮೂಲಕ ಭರ್ತಿ ಮಾಡಲಾಗಿದೆ. ಇತ್ತೀಚೆಗೆ ಸರ್ಕಾರವು ಹೆಚ್ಚುವರಿಯಾಗಿ 150 ತಪಾಸಕರ ಹುದ್ದೆಗಳು ಹಾಗೂ 150 ಅಧೀಕ್ಷಕರು (ತಾಂತ್ರಿಕ) ಒಟ್ಟು 300 ಹುದ್ದೆಗಳಿಗೆ ಮಂಜೂರಾತಿ ನೀಡಿರುತ್ತದೆ.

ಭೂಮಾಪನ ಇಲಾಖೆಯಲ್ಲಿ 1991ನೇ ಸಾಲಿನಲ್ಲಿ ಮಾತ್ರ 1000 ಭೂಮಾಪಕರ ಹೆಚ್ಚುವರಿ ಹುದ್ದೆಗಳಿಗೆ ಮಂಜೂರಾತಿ ನೀಡಿರುತ್ತದೆ. 1991 ರ ನಂತರ ಯಾವುದೇ ಭೂಮಾಪಕರ ಹುದ್ದೆಗಳನ್ನು ಸೃಷ್ಟಿಸಿರುವುದಿಲ್ಲ. ಆದರೆ ಇಲಾಖೆಯ ಚಟುವಟಿಕೆಗಳು ಬಹಳವಾಗಿ ಹೆಚ್ಚಿರುತ್ತವೆ.

ರಾಜ್ಯದಲ್ಲಿ ಸುಮಾರು 25 ಲಕ್ಷ ಬಹುಮಾಲೀಕತ್ವದ ಆರ್.ಟಿ.ಸಿಗಳಿದ್ದು ಇವುಗಳ ಸಂಬಂಧ ಮ್ಯುಟೇಷನ್ ಪೋಡಿ ಕೆಲಸ ಕೈಗೊಳ್ಳಬೇಕಿರುತ್ತದೆ. ಇಲಾಖೆಯಲ್ಲಿ ಭೂಮಾಪಕರ ತೀವ್ರ ಕೊರತೆ ಇರುವುದರಿಂದ ಕಾರ್ಯವನ್ನು ಸಕಾಲದಲ್ಲಿ ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ.

ಪರವಾನಗಿ ಭೂಮಾಪಕರು ನಿರ್ವಹಿಸುತ್ತಿರುವ ಕೆಲಸವನ್ನು ಸೂಕ್ತ ಪರಿಶೀಲನೆಗೆ ಒಳಪಡಿಸಲು ಸಾಧ್ಯವಾಗುತ್ತಿಲ್ಲ.

ಸರ್ಕಾರವು ರಾಜ್ಯದ ಎಲ್ಲಾ ಸರ್ಕಾರಿ ಜಮೀನುಗಳ ಅಳತೆಯನ್ನು ಮುಂದಿನ 2 ವರ್ಷಗಳಲ್ಲಿ ಪೂರೈಸುವ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಪ್ರತಿ 6 ತಿಂಗಳುಗಳಲ್ಲಿ 52 ತಾಲ್ಲೂಕುಗಳನ್ನು ಪೂರ್ಣಗೊಳಿಸಲಾಗುವುದು. ಈ ಯೋಜನೆಯ ಅಡಿಯಲ್ಲಿ ಸರ್ಕಾರಿ ಜಮೀನುಗಳ ಡಾಟಾ ಬೇಸನ್ನು ರಚಿಸುತ್ತಿದ್ದು, ಇದು ಬೆಲೆ ಬಾಳುವ ಮತ್ತು ಬಿಟ್ಟುಹೋಗಿರುವ ಸರ್ಕಾರಿ ಜಮೀನುಗಳ ಅಳತೆ ಮತ್ತು ರಕ್ಷಣೆಗಾಗಿ ಭೂಮಾಪಕರ ಅವಶ್ಯಕತೆ ಇರುತ್ತದೆ.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ/ ಬಿಎಂಆರ್‌ಡಿಎ/ ಬಿಬಿಎಂಪಿ/ ಕೆಐಎಡಿಬಿ/ ನಗರಾಭಿವೃದ್ಧಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ, ರಾಷ್ಟ್ರೀಯ ಹೆದ್ದಾರಿ, ರೈಲ್ವೆ ಇಲಾಖೆ ಮುಂತಾದ ಇಲಾಖೆಗಳಲ್ಲಿ ಭೂಸ್ವಾಧೀನ ಅಳತೆಗಾಗಿ ಭೂಮಾಪಕರ ಅವಶ್ಯಕತೆ ಇರುತ್ತದೆ. ಭೂಮಾಪಕರ ಕೊರತೆಯಿಂದಾಗಿ ಈ ಇಲಾಖೆ/ಪ್ರಾಧಿಕಾರಿಗಳಿಗೆ ಭೂಮಾಪಕರನ್ನು ನಿಯೋಜಿಸಲು ಸಾಧ್ಯವಾಗದೇ ಇರುವುದರಿಂದ ಅನ್ಯ ಇಲಾಖೆಗಳಿಗೆ ಅಸಮಾಧಾನ ಉಂಟಾಗಿರುತ್ತದೆ.

ಮೇಲೆ ತಿಳಿಸಿದ ಯೋಜನೆಗಳನ್ನು ಕೈಗೊಳ್ಳಲು ಈ ಕೆಳಗೆ ನಮೂದಿಸಿರುವ ಹೆಚ್ಚುವರಿ ಹುದ್ದೆಗಳು ಅಗತ್ಯವಾಗಿರುತ್ತದೆ.

1) ದ್ವಿ.ದ.ಭೂ – 2302

2) ಪರ್ಯಾವೇಕ್ಷಕರು – 601

3) ಅಧೀಕ್ಷಕರು (ತಾಂತ್ರಿಕ) – 163

4) ಭೂದಾಖಲೆಗಳ ಉಪ ನಿರ್ದೇಶಕರು –10

5) ಭೂದಾಖಲೆಗಳ ಜಂಡಿ ನಿರ್ದೇಶಕರು –04 ಹುದ್ದೆಗಳು

ಆದುದರಿಂದ

(i) 450 ಪರ್ಯಾವೇಕ್ಷಕರ ಹುದ್ದೆಗಳು

(ii) 2008–09ನೇ ಸಾಲಿನಲ್ಲಿ 800 ಭೂಮಾಪಕರ ಹುದ್ದೆಗಳು

(iii) 2009–2010ನೇ ಸಾಲಿನಲ್ಲಿ 800 ಭೂಮಾಪಕರ ಹುದ್ದೆಗಳನ್ನು ಸೃಜಿಸಲು ಹಾಗೂ ಕಾಲಕಾಲಕ್ಕೆ ಖಾಲಿ ಇರುವ ಅಧಿಕಾರಿ, ಪರ್ಯಾವೇಕ್ಷಕರ ಹುದ್ದೆಗಳನ್ನು ಭರ್ತಿ ಮಾಡಲು ಕೋರಿದ್ದಾರೆ.

ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ಹೆಚ್ಚುವರಿ ಹುದ್ದೆಗಳ ಸೃಜನೆಯ ಅವಶ್ಯಕತೆಯನ್ನು ಮನಗಂಡ ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 98 ಭೂದಾಸ 2007, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ 400 ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗಳನ್ನು ವೇತನ ಶ್ರೇಣಿ (ರೂ. 6250–12000)ರಲ್ಲಿ ತಾತ್ಕಾಲಿಕವಾಗಿ ಸೃಜಿಸಲು ಹಾಗೂ ಇಲಾಖೆಯಲ್ಲಿ ಖಾಲಿ ಇರುವ 550 ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗಳನ್ನು ತುಂಬಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅ.ಟಿ.ಸಂ.ಎಫ್‌ಡಿ 08 ವೆಚ್ಚ 7/09 ದಿನಾಂಕ:3.2.2009ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 736 ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 'ಬೆಂಗಳೂರು ಐ.ಟಿ.ಇನ್–2008'ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ವಿಧ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಬಗ್ಗೆ ಆದೇಶ

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ ಮಾತಂಇ 47 ಅಜವಿ 2008, ಬೆಂಗಳೂರು, ದಿನಾಂಕ :20.9.2008

2. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ. ADM[1]/CR-18/2008-09, Dated :18.12.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2008ನೇ ಸಾಲಿನಲ್ಲಿ ಹಮ್ಮಿಕೊಳ್ಳುವ 'ಬೆಂಗಳೂರು ಐ.ಟಿ.ಇನ್–2008' ಮೇಳದ ಅಂಗವಾಗಿ ವಿದ್ಯಾರ್ಥಿಗಳಲ್ಲಿ ಅಂತರ್ಜಾಲ ಪ್ರಪಂಚದ ಪ್ರಯೋಜನಗಳು ಮತ್ತು ಇತ್ತೀಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗಿರುವ ತಂತ್ರಜ್ಞಾನ ಬದಲಾವಣೆಗಳ ಅರಿವು ಮೂಡಿಸುವ ಸಲುವಾಗಿ 'ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ' ಕಾರ್ಯಕ್ರಮವನ್ನು ನಡೆಸುವ ಉದ್ದೇಶಕ್ಕಾಗಿ ಸಾರಿಗೆ, ಊಟ, ಮತ್ತು ಸಭಾಂಗಣದ

ಕಾರ್ಯಕ್ರಮಕ್ಕೆ ಸಂಬಂಧಿಸಿದ ಇನ್ನಿತರೆ ವೆಚ್ಚಗಳನ್ನು ಭರಿಸುವ ಸಲುವಾಗಿ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲು ಪ್ರತಿ ಜಿಲ್ಲೆಗೂ ರೂ. 50,000/– ಅನುದಾನದಂತೆ ಒಟ್ಟು ರೂ. 14,50,000/– ಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ.

ಮೇಲೆ ಓದಲಾದ (2) ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ಪತ್ರದಲ್ಲಿ ಜಿಲ್ಲೆಯ 42 ಕೇಂದ್ರಗಳಲ್ಲಿ 'ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ' ಕಾರ್ಯಕ್ರಮವು ಯಶಸ್ವಿಯಾಗಿ ನಡೆದಿದ್ದು, ಕಾರ್ಯಕ್ರಮದ ಅನುಷ್ಠಾನಕ್ಕೆ ಜಿಲ್ಲಾಡಳಿತಕ್ಕೆ ತಗುಲಿದ ವೆಚ್ಚ ಸುಮಾರು ರೂ. 2.00 ಲಕ್ಷ ಆಗಿದ್ದು, ಇದರಲ್ಲಿ ಕೇಂದ್ರಗಳಿಗೆ ನೀಡಿದ ಸಹಾಯಧನ, ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳನ್ನು ಕೆಎಸ್‌ಆರ್‌ಟಿಸಿ ರೂಟ್ ಬಸ್‌ಗಳಲ್ಲಿ ಕೇಂದ್ರಗಳಿಗೆ ಕರೆದುಕೊಂಡು ಹೋಗುವ ವೆಚ್ಚ ಉತ್ತಮ ಕೇಂದ್ರಗಳಿಗೆ ಪ್ರಶಸ್ತಿ ವಿದ್ಯಾರ್ಥಿ ಸ್ವಯಂ ಸೇವಕರಿಗೆ ಪ್ರಮಾಣ ಪತ್ರ ಮತ್ತು ಸಂಸ್ಥೆಗಳಿಗೆ ಅಭಿನಂದನಾ ಪತ್ರ ಉದ್ಘಾಟನಾ ಕಾರ್ಯಕ್ರಮದ ವೆಚ್ಚಗಳು ಮುಖ್ಯವಾಗಿ ಒಳಗೊಂಡಿದ್ದು, ಸದರಿ ಕಾರ್ಯಕ್ರಮಕ್ಕೆ ಹೆಚ್ಚುವರಿಯಾಗಿ ರೂ. 1.00 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 47 ಅಚವಿ 2008, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 'ಬೆಂಗಳೂರು ಐ.ಟಿ.ಇನ್–2008'ರ ಮೇಳದ ಅಂಗವಾಗಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರಿನಲ್ಲಿ 'ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ' ಕಾರ್ಯಕ್ರಮದ ಅನುಷ್ಠಾನಕ್ಕೆ ಹೆಚ್ಚುವರಿಯಾಗಿ ರೂ. 1.00 ಲಕ್ಷಗಳ ಅನುದಾನವನ್ನು (ಒಂದು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತುತ ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)' ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು..

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 740

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ :** 2008–09ನೇ ಸಾಲಿಗೆ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1 ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 24 ಆಡವಿ 2008 ದಿನಾಂಕ :12.6.08

2. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 74 ಆಡವಿ 2008 ದಿನಾಂಕ :31.7.08

3. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 74 ಆಡವಿ 2008 ದಿನಾಂಕ :22.12.08

4. ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂನಿ/ಲೆಕ್ಕ – 1/16/ಕೆಬಿಟ್ಸ್ ಅನುದಾನ 238/08–09, ದಿ :9–7–08.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–01 ಮಾಹಿತಿ ತಂತ್ರಜ್ಞಾನ–ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು [ಯೋಜನೆ]'ರಡಿಯಲ್ಲಿ ರೂ., 600.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಅದರಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ರೂ. 72.00ಲಕ್ಷ [ರೂ. ಎಪ್ಪತ್ತೆರೆಡು ಲಕ್ಷಗಳು ಮಾತ್ರ] ಗಳ ಅನುದಾನವನ್ನು ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಮೇಲೆ [2] ಮತ್ತು [3]ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಕ್ರಮವಾಗಿ ರೂ. 35 ಲಕ್ಷಗಳು ಮತ್ತು ರೂ. 37 ಲಕ್ಷಗಳ ಅನುದಾನವನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ 8–12–2008 ರ ಪತ್ರದಲ್ಲಿ ಕೆಬಿಟ್ಸ್ ಸಂಸ್ಥೆಯಲ್ಲಿನ ಅಧಿಕಾರಿಗಳಿಗೆ 5ನೇ ವೇತನ ಆಯೋಗದ ಆದೇಶದಂತೆ 1–4–2006 ರಿಂದ 31–3–2007ರವರೆಗಿನ ಬಾಕಿ ಇರುವ ವೇತನ ಮತ್ತು ಭತ್ಯೆಗಳ ವ್ಯತ್ಯಾಸದ ಪಾವತಿಗಾಗಿ ರೂ. 5.00 ಲಕ್ಷಗಳ ಅನುದಾನವನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 74 ಅಡವಿ 2007, ಬೆಂಗಳೂರು, ದಿನಾಂಕ:2ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕೆಬಿಟ್ಸ್ ಸಂಸ್ಥೆಯಲ್ಲಿನ ಅಧಿಕಾರಿಗಳಿಗೆ 5ನೇ ವೇತನ ಆಯೋಗದ ಆದೇಶದಂತೆ 1–4–2006 ರಿಂದ 31–3–2007ರವರೆಗಿನ ಬಾಕಿ ಇರುವ ವೇತನ ಮತ್ತು ಭತ್ಯೆಗಳ ವ್ಯತ್ಯಾಸದ ಪಾವತಿಗಾಗಿ ರೂ. 5.00 ಲಕ್ಷಗಳ ಅನುದಾನವನ್ನು ಹೆಚ್ಚುವರಿಯಾಗಿ ಕೆಬಿಟ್ಸ್ ಸಂಸ್ಥೆಗೆ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಡೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 741 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ :** ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಹಾಗೂ ಅದರಡಿಯ ಸಂಸ್ಥೆ/ ನಿಗಮಗಳಲ್ಲಿ ಅನುಷ್ಠಾನಗೊಳ್ಳುತ್ತಿರುವ "ಕಾಗದ ರಹಿತ ಕಛೇರಿ ಆಡಳಿತ" ಯೋಜನೆಗೆ ಅವಶ್ಯವಿರುವ ಸಿಬ್ಬಂದಿಗಳ ವೆಚ್ಚವನ್ನು ಭರಿಸಲು ಅನುದಾನ ಬಿಡುಗಡೆ ಬಗ್ಗೆ –ಆದೇಶ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 78 ಅಡವಿ 2007 ದಿನಾಂಕ :18.9.2007

2. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 83 ಅಡವಿ 2007 ದಿನಾಂಕ :19.11.2007, 14.12.2007, 28.6.2008 ಮತ್ತು 4.11.2008,

3. ನಿರ್ದೇಶಕರು, (ನಿರ್ವಹಣೆ) ಕಿಯೋನಿಕ್ಸ್ ಇವರ ಪತ್ರ ಸಂಖ್ಯೆ ಕರವಿ/ಆನಿನಿ/ಇಡಿಪಿ/ಕಾರಅಯೋ/.ಹಬಿಬ/2008, ದಿನಾಂಕ :28.1.2009.

**ಪ್ರಸ್ತಾವನೆ:**

ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಹಾಗೂ ಅದರಡಿಯ ಸಂಸ್ಥೆ/ನಿಗಮಗಳಲ್ಲಿ ಕಾಗದ ರಹಿತ ಕಛೇರಿ ಆಡಳಿತ ಯೋಜನೆಯನ್ನು ಅನುಷ್ಠಾನಗೊಳಿಸಲು ಮೇಲೆ [1]ರಲ್ಲಿ ಓದಲಾದ ಆದೇಶದಲ್ಲಿ ಈ ಯೋಜನೆಗೆ ರೂ., 36,62,202/–ಗಳ ಅನುದಾನವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಮೇಲೆ ಓದಲಾದ [2] ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಸದರಿ ಯೋಜನೆ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಿರಿಯ ಹಾಗೂ ಹಿರಿಯ ಪ್ರೋಗ್ರಾಮರ್‌ಗಳ ವೇತನ ವೆಚ್ಚಕ್ಕಾಗಿ ಅನುಕ್ರಮವಾಗಿ ರೂ. 2,33,657/–ಗಳ, ರೂ 4,85, 400/– ರೂ. 2,43, 000/–ಗಳ ಹಾಗೂ ರೂ. 2,43,000/–ಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆಗೊಳಿಸಿದೆ.

ಮೇಲೆ [3] ರಲ್ಲಿ ಓದಲಾದ ಕಿಯೋನಿಕ್ಸ್ ಸಂಸ್ಥೆಯ ನಿರ್ದೇಶಕರು (ನಿರ್ವಹಣೆ) ಇವರ ಪತ್ರದಲ್ಲಿ ಮೇಲೆ [2] ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ:4–11–2008ರಲ್ಲಿ ಬಿಡುಗಡೆ ಮಾಡಲಾದ ರೂ. 2,43,000/– ಗಳ ಅನುದಾನವನ್ನು ಡಿಸೆಂಬರ್ ತಿಂಗಳಿನವರೆಗೆ ಸಂಪೂರ್ಣವಾಗಿ ಉಪಯೋಗಿಸಲಾಗಿದೆ ಎಂದು ತಿಳಿಸುತ್ತಾ, ಮೂರು ಕಿರಿಯ ಪ್ರೋಗ್ರಾಮರ್ ಗಳಿಗೆ 2009ರ ಜನವರಿ ತಿಂಗಳಿನ ಹಾಗೂ ಎರಡು ಪ್ರೋಗ್ರಾಮರ್‌ಗಳಿಗೆ 2009ರ ಜನವರಿ ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳ ವೇತನ ಒಟ್ಟು ರೂ. 1,26,000/– ಗಳನ್ನು ಭರಿಸಲು ಸೂಕ್ತ ಅನುದಾನವನ್ನು ಬಿಡುಗಡೆ ಮಾಡಲು ಕೋರಲಾಗಿದೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಮೂರು ಕಿರಿಯ ಪ್ರೊಗ್ರಾಮರ್‌ಗಳಿಗೆ 2009ರ ಜನವರಿ ತಿಂಗಳಿನ ಹಾಗೂ ಎರಡು ಪ್ರೊಗ್ರಾಮರ್‌ಗಳಿಗೆ 2009ರ ಜನವರಿ, ಫೆಬ್ರವರಿ, ಮತ್ತು ಮಾರ್ಚ್, ತಿಂಗಳುಗಳ ವೇತನ ಒಟ್ಟು ರೂ, 1,26,000/–ಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆಗೊಳಿಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 83 ಅಡವಿ 2007, ಬೆಂಗಳೂರು, ದಿನಾಂಕ:2ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ಹೇಳಿದ ಸಂದರ್ಭದಲ್ಲಿ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಹಾಗೂ ಅದರಡಿಯ ಸಂಸ್ಥೆ/ನಿಗಮಗಳಲ್ಲಿ "ಕಾಗದ ರಹಿತ ಕಛೇರಿ ಆಡಳಿತ" ಯೋಜನೆಯನ್ನು ಅನುಷ್ಠಾನಗೊಳಿಸಲು ಮೂರು ಕಿರಿಯ ಪ್ರೋಗ್ರಾಮರ್‌ಗಳಿಗೆ 2009ರ ಜನವರಿ ತಿಂಗಳಿನ ಹಾಗೂ ಎರಡು ಪ್ರೋಗ್ರಾಮರ್ ಗಳಿಗೆ 2009ರ ಜನವರಿ, ಫೆಬ್ರವರಿ, ಮತ್ತು ಮಾರ್ಚ್ ತಿಂಗಳುಗಳ ವೇತನ ವಿತರಣೆಗಾಗಿ ಒಟ್ಟು ರೂ. 1,26,000/– (ಒಂದು ಲಕ್ಷದ ಇಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ) ಅನುದಾನವನ್ನು ಸದರಿ ನಿಗಮಕ್ಕೆ ಪಾವತಿಸಲು, ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಮಂಜೂರು ಮಾಡಲಾಗಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು (ನಿರ್ವಹಣೆ) ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ ಇವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು..

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 742

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಆರ್ಥಿಕ ಸಚಿವಾಲಯ**

**ವಿಷಯ :** ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳ ಪರಿಷ್ಕರಣೆ ಕುರಿತು.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 19 ಎಸ್‌ಆರ್‌ಪಿ 99 ದಿನಾಂಕ :10–8–1999

2. ಸರ್ಕಾರಿ ಆದೇಶ ಸಂಖ್ಯೆ :ಎಫ್‌ಡಿ 14 ಎಸ್‌ಆರ್‌ಪಿ 2002 ದಿನಾಂಕ :12.4.2002.

3. ಸರ್ಕಾರಿ ಆದೇಶ ಸಂಖ್ಯೆ :ಎಫ್‌ಡಿ 8 ಎಸ್‌ಆರ್‌ಪಿ 2007 ದಿನಾಂಕ :16.5.2007

**ಪ್ರಸ್ತಾವನೆ:**

ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆಯನ್ನು ಪರಿಷ್ಕರಿಸಲಾಗುವುದೆಂದು ಮಾನ್ಯ ಮುಖ್ಯ ಮಂತ್ರಿಯವರು 2009–2010ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪ್ರಕಟಿಸಿದ್ದರು ಮೇರೆಗೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 01 ಎಸ್‌ಆರ್‌ಪಿ 2009, ಬೆಂಗಳೂರು, ದಿನಾಂಕ:2ನೇ ಮಾರ್ಚ್ 2009**

ಸರ್ಕಾರವು ಈ ಕೆಳಗೆ ಸೂಚಿಸಿರುವ ನಗರಗಳು ಮತ್ತು ಪಟ್ಟಣಗಳಲ್ಲಿ ಕಾರ್ಯ ನಿರ್ವಹಿಸುವ ರಾಜ್ಯ ಸರ್ಕಾರಿ ನೌಕರನ ಮನೆ ಬಾಡಿಗೆ ಭತ್ಯೆ ದರಗಳನ್ನು ದಿನಾಂಕ:1ನೇ ಏಪ್ರಿಲ್ 2009 ರಿಂದ ಜಾರಿಗೆ ಬರುವಂತೆ ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಲು ಹರ್ಷಿಸುತ್ತದೆ.

| ನಗರ/ಪಟ್ಟಣಗಳ ವರ್ಗೀಕರಣ | ಮನೆ ಬಾಡಿಗೆ ಭತ್ಯೆಯ ಪರಿಷ್ಕೃತ ದರಗಳು |
|---|---|
| ಎ | ವಾಸ್ತವಿಕ ಮೂಲ ವೇತನದ ಶೇಕಡ 20% ರಷ್ಟು |
| ಬಿ–1<br>ಬಿ–2 | ವಾಸ್ತವಿಕ ಮೂಲ ವೇತನದ ಶೇಕಡ 15% ರಷ್ಟು |
| ಸಿ | ವಾಸ್ತವಿಕ ಮೂಲ ವೇತನದ ಶೇಕಡ 9% ರಷ್ಟು |
| ಡಿ | ವಾಸ್ತವಿಕ ಮೂಲ ವೇತನದ ಶೇಕಡ 6% ರಷ್ಟು |
| ಇ | ವಾಸ್ತವಿಕ ಮೂಲ ವೇತನದ ಶೇಕಡ 5% ರಷ್ಟು |

2. ಈ ಆದೇಶಗಳು, ಕರ್ನಾಟಕ ನಾಗರೀಕ ಸೇವಾ ನಿಯಮಗಳ ಉಪಬಂಧಗಳ ವ್ಯಾಪ್ತಿಯೊಳಗೆ ಬರುವ ಪೂರ್ಣಕಾಲಿಕ ಮತ್ತು ಕಾಲಿಕ ವೇತನ ಶ್ರೇಣಿಯಲ್ಲಿನ ಎಲ್ಲಾ ಸರ್ಕಾರಿ ನೌಕರರಿಗೂ ಅನ್ವಯವಾಗುತ್ತದೆ.

3. ಈ ನಿಯಮಗಳನ್ನು (i) ಕಾಲಿಕ ವೇತನ ಶ್ರೇಣಿಯಲ್ಲಿರುವ ವರ್ಕ್‌ಚಾರ್ಜ್ಡ್ ನೌಕರರು (ii) ಕಾಲಿಕ ವೇತನ ಶ್ರೇಣಿಯಲ್ಲಿರುವ ಅನುದಾನಿತ ಶಿಕ್ಷಣ ಸಂಸ್ಥೆಗಳ ಪೂರ್ಣಕಾಲಿಕ ನೌಕರರು ಮತ್ತು ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿ (iii) ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಯಲ್ಲಿ ವೇತನ ಪಡೆಯುವ ವಿಶ್ವವಿದ್ಯಾನಿಲಯಗಳ, ಎಂಜಿನಿಯರಿಂಗ್ ಕಾಲೇಜುಗಳ ಸಿಬ್ಬಂದಿಗೆ ಮತ್ತು (iv) ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಅನ್ವಯವಾಗುವಂತೆ ವಿಸ್ತರಿಸಲಾಗಿದೆ.

4. ಮನೆ ಬಾಡಿಗೆ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ 50 ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು 50 ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಪಿ.ಆರ್. 746

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀಮತಿ ಮಂಗಳ ಎಸ್.ಎಂ. ತಹಶೀಲ್ದಾರ್ ಗುಡಿಬಂಡೆ ತಾಲ್ಲೂಕು ಹಾಗೂ ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಇವರುಗಳಿಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಕಾರಣ ಕೇಳುವ ನೋಟೀಸು ದಿನಾಂಕ :19.11.2008

2. ಸರ್ಕಾರದ ಅಧಿಸೂಚನೆ ಸಂ :ಆರ್ ಡಿ 241 ಎಎಸ್ ಡಿ 2005, ದಿನಾಂಕ :25.1.2006.

3. ಸರ್ಕಾರದ ಅಧಿಸೂಚನೆ ಸಂ :ಕಂಇ 08 ಎಟಿಎಸ್ 2006, ದಿನಾಂಕ :15.4.2006.

**ಪ್ರಸ್ತಾವನೆ:**

ಶ್ರೀಮತಿ ಮಂಗಳ ಎಸ್.ಎಂ. ಪರಿವೀಕ್ಷಣಾ ತಹಶೀಲ್ದಾರ್ 1999ನೇ ತಂಡ ಪ್ರಸ್ತುತ ತಹಶೀಲ್ದಾರ್, ಗುಡುಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಹಾಗೂ ಶ್ರೀಮತಿ ಆಶಾ ಪರ್ವೀನ್ ಪರಿವೀಕ್ಷಣಾ ತಹಶೀಲ್ದಾರ್ 1998ನೇ ತಂಡ ಇವರುಗಳಿಗೆ ಕ್ರಮವಾಗಿ ಮೇಲೆ ಓದಲಾದ ಕ್ರ.ಸಂ (2) ಹಾಗೂ (3)ರಲ್ಲಿ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ನೀಡಿ ಆದೇಶಿಸಲಾಗಿತ್ತು. ಸದರಿಯವರುಗಳು 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿರುವುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಮೇಲೆ ಓದಲಾದ ಕ್ರ.ಸಂ (1), ದಿನಾಂಕ: 19–11–2008ರಲ್ಲಿ ಸದರಿಯವರುಗಳಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದರಂತೆ

ಶ್ರೀಮತಿ ಮಂಗಳ ಎಸ್.ಎಂ. ಹಾಗೂ ಶ್ರೀಮತಿ ಆಶಾ ಪರ್ವೀನ್ ಇವರುಗಳು ಕಾರಣಾಂತರಗಳಿಂದ ಇಲಾಖಾ ಪರೀಕ್ಷೆ ತೆಗೆದುಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಪ್ರಸ್ತುತ ಸಾಲಿನಲ್ಲಿ ಬಾಕಿ ಇರುವ ಇಲಾಖಾ ಪರೀಕ್ಷೆಯನ್ನು ಪಾಸು ಮಾಡುವುದಾಗಿ ಲಿಖಿತ ರೂಪದಲ್ಲಿ ಸಮಾಜಾಯಿಷಿಗಳನ್ನು ಸಲ್ಲಿಸುತ್ತಾ ಒಂದು ವರ್ಷದವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ಕೋರಿಕೊಂಡಿರುತ್ತಾರೆ. ಆದ್ದರಿಂದ ಶ್ರೀಮತಿ ಮಂಗಳ ಎಸ್.ಎಂ. ಹಾಗೂ ಶ್ರೀಮತಿ ಆಶಾ ಪರ್ವೀನ್ ಇವರುಗಳು ಸಲ್ಲಿಸಿರುವ ಸಮಜಾಯಿಷಿಗಳನ್ನು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಪ್ರೋಬೇಷನ್) 1977ರ ನಿಯಮ 4(1)(i) ರ ಪ್ರಕಾರ ಒಂದು ವರ್ಷದವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 15 ಎಎಸ್‌ಡಿ 2008(ಭಾಗ), ಬೆಂಗಳೂರು, ದಿನಾಂಕ:25ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀಮತಿ ಮಂಗಳ. ಎಸ್.ಎಂ. ಪ್ರೋಬೇಷನರಿ ತಹಶೀಲ್ದಾರ್, 1999ನೇ ತಂಡ ಪ್ರಸ್ತುತ, ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಹಾಗೂ ಶ್ರೀಮತಿ ಆಶಾ ಪರ್ವೀನ್, ಪ್ರೊಬೇಷನರಿ ತಹಶೀಲ್ದಾರ್, 1998ನೇ ತಂಡ, ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಪ್ರೋಬೇಷನರಿ) 1977ರ ನಿಯಮ 4(1)( ii)ರ ಪ್ರಕಾರ ಒಂದು ವರ್ಷದವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ಚೌಕಿಮಠ**

ಪಿ.ಆರ್. 748

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಗುಳೇದಗುಡ್ಡ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**

1 ಸರ್ಕಾರದ ಆದೇಶ ಸಂಖ್ಯೆ :ನಅಇ 195 ಬೆಮಪ್ರಾ 2003 ದಿನಾಂಕ :4.8.03.

2. ಮುಖ್ಯಾಧಿಕಾರಿ, ಪುರಸಭೆ ಯೋಜನಾ ಪ್ರಾಧಿಕಾರ, ಗುಳೇದಗುಡ್ಡ ಇವರ ಪತ್ರ ಸಂಖ್ಯೆ ನಯೋಪ್ರಾಗು/ಮಹಾಯೋಜನೆ/2008–09/445, ದಿನಾಂಕ :1.12.08.

3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ ನಯೋ(7) :ಉನಿ I/ ಗುಳೇದಗುಡ್ಡ./ಮ.ಯೋ/ಅಂತಿಮ/2009ರಲ್ಲಿ ದಿನಾಂಕ :3.2.09ರಂದು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಗುಳೇದಗುಡ್ಡ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಗುಳೇದಗುಡ್ಡ ಪುರಸಭೆ ಯೋಜನಾ ಪ್ರಾಧಿಕಾರವು ಗುಳೇದಗುಡ್ಡ ಪಟ್ಟಣದ ಸ್ಥಳಿಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ನಗರ ಯೋಜನಾ ಇಲಾಖೆಯ ಮುಖಾಂತರ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಏಕ ಕಡತದಲ್ಲಿ ಗುಳೇದಗುಡ್ಡ ಪಟ್ಟಣದ ಜನಸಂಖ್ಯೆಯು 2021 ರಲ್ಲಿ 52,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಗುಳೇದಗುಡ್ಡ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 575 ಹೆಕ್ಟೇರ್ ಪ್ರದೇಶದಲ್ಲಿ 473 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಒಟ್ಟು 473 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 241.95 ಹೆಕ್ಟೇರ್ (ಶೇ. 51.15), ವಾಣಿಜ್ಯಕ್ಕಾಗಿ 15.14 ಹೆಕ್ಟೇರ್ (ಶೇ. 3.20), ಕೈಗಾರಿಕೆಗಾಗಿ 19.64 ಹೆಕ್ಟೇರ್ (ಶೇ./4.15), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 29.78 ಹೆಕ್ಟೇರ್ (ಶೆ. 6.30), ಉದ್ಯಾನವನ/ಬಯಲು ಜಾಗೆಗಳಿಗೆ 37.46 ಹೆಕ್ಟೇರ್ (ಶೇ. 7.92), ನಾಗರೀಕ ಸೌಲಭ್ಯಕ್ಕಾಗಿ 5.53 ಹೆಕ್ಟೇರ್ (ಶೇ. 1.17) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 123.50 ಹೆಕ್ಟೇರ್ (ಶೇ. 26.11) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ

ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ., ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 84 ಬೆಮಪ್ರಾ 2009, ಬೆಂಗಳೂರು, ದಿನಾಂಕ:27ನೇ ಫೆಬ್ರವರಿ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಳೇದಗುಡ್ಡ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3) ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್. 782 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ವಿಷಯ :** ಇಂಡಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜು ವೆಚ್ಚ ರೂ. 1420.00 ಲಕ್ಷಗಳ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ :ಕಜಮಂ:ಉಮುಅ–1:ತಾಸ–1:ಸ–6:ಒಚಯೋ:ಇಂಡಿ:2008–09:3240 ದಿನಾಂಕ:13.1.2009

**ಪ್ರಸ್ತಾವನೆ:**

ಇಂಡಿ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯಂತೆ 31482 ಇದ್ದು 2026 ರ ಮಧ್ಯಂತರ ಅವಧಿಗೆ 51000 ಹಾಗೂ 2041 ರ ಅಂತಿಮ ಅವಧಿ ವೇಳೆಗೆ 66000 ಎಂದು ಅಂದಾಜಿಸಿ ಯೋಜನೆಯನ್ನು ವಿನ್ಯಾಸಗೊಳಿಸಲಾಗಿದೆ. ಇಂಡಿ ಪಟ್ಟಣಕ್ಕೆ ಭೀಮಾ ನದಿಯಿಂದ ಪ್ರಸ್ತುತ ತಲಾ ದಿನಂಪ್ರತಿ 113 ಲೀಟರ್‌ನಂತೆ ನೀರು ಸರಬರಾಜು ಮಾಡುತ್ತಿದ್ದು, ಯೋಜನೆ ಪೂರ್ಣಗೊಂಡ ನಂತರ ತಲಾ ದಿನಂ ಪ್ರತಿ 135 ಲೀಟರ್ ನೀರು ಸರಬರಾಜು ಮಾಡಲು ಉದ್ದೇಶಿಸಿದೆ. ಪ್ರಸ್ತುತ ಈ ಪಟ್ಟಣಕ್ಕೆ ಯಾವುದೇ ಒಳಚರಂಡಿ ವ್ಯವಸ್ಥೆ ಇಲ್ಲದಿರುವುದರಿಂದ ಒಳಚರಂಡಿಯ ಕಲುಷಿತ ನೀರು ತೆರೆದ ನಾಲೆಗಳ ಮೂಲಕ ರಸ್ತೆ ಬದಿಯ ಚರಂಡಿಗಳ ಮೂಲಕ ಹರಿದು ನೇರವಾಗಿ ಹಳ್ಳಗಳ ಕಡೆಗೆ ಸೇರುತ್ತಿರುವುದರಿಂದ ಕೆಟ್ಟ ವಾತವರಣ ಸೃಷ್ಟಿಯಾಗಿ ವಾಯುಮಾಲಿನ್ಯ ಮತ್ತು ಪರಿಸರ ಮಾಲಿನ್ಯ ಉಂಟಾಗುತ್ತಿರುವುದನ್ನು ತಡೆಯುವ ಸಲುವಾಗಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಅತ್ಯವಶ್ಯಕವೆಂದು ಭಾವಿಸಿ ಅಂದಾಜು ತಯಾರಿಸಲಾಗಿದೆ.

2008–09ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿ ಅನುಸಾರ ಯೋಜನೆಯ ಅಂದಾಜು ರೂ. 1420.00 ಲಕ್ಷಗಳಿಗೆ ಸಿದ್ದಪಡಿಸಿದ್ದು, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಒಳಚರಂಡಿ ಯೋಜನೆ ಶೀರ್ಷಿಕೆಯಡಿ ಕೈಗೆತ್ತಿಕೊಳ್ಳಲು ಹಾಗೂ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಕೋರಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳ ಸಾಲ 50% | ರೂ. 710.00 ಲಕ್ಷಗಳು |
| ಕರ್ನಾಟಕ ಸರ್ಕಾರದ ಸಾಲ 30% | ರೂ. 426.00 ಲಕ್ಷಗಳು |
| ಪಟ್ಟಣ ಪಂಚಾಯಿತಿಯಿಂದ 20% | ರೂ. 284.00 ಲಕ್ಷಗಳು |
| | ಒಟ್ಟು ರೂ. 1420.00 ಲಕ್ಷಗಳು |

ಈ ಯೋಜನೆಯನ್ನು 2007–08ನೇ ಸಾಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅನುಮೋದಿತ ಕ್ರಿಯ ಯೋಜನೆಯಲ್ಲಿ ಸೇರಿಸಿ ಸದರಿ ಯೋಜನೆಗೆ ರೂ. 240.00 ಲಕ್ಷಗಳನ್ನು ಅರಿವು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 04 ಯುಡಿಎಸ್ 2009, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಇಂಡಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜು ವೆಚ್ಚ ರೂ. 1420.00 ಲಕ್ಷಗಳ (ರೂ. ಒಂದು ಸಾವಿರದ ನಾಲ್ಕು ನೂರ ಇಪ್ಪತ್ತು ಲಕ್ಷಗಳು ಮಾತ್ರ) ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು "ಒಳಚರಂಡಿ ಯೋಜನೆಯಡಿ" ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಕೈಗೆತ್ತಿಕೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) Water rates as proposed by KUWS & DB have to be implemented to meet O&M cost

2) KTPP provisions, quality control and timely completion is emphasized.

3) Escalation should be limited to a maximum of 7% of scheme In view of the size to the project, overheads as a proportion of the cost should be low.

4) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

5) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 69 Exp–9:2009 ದಿನಾಂಕ:26.2.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 783

**ವಿಷಯ :** ಮಾಲೂರು ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜಿಗೆ ರೂ. 2250.00 ಲಕ್ಷಗಳ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಮಂ:ಮುಅ:ಉಮುಅ–1:ಸಅ–5:ಮಾಲೂರು–ಒ.ಚಯೋ:1190:2008–09, ದಿನಾಂಕ:22.7.2008

**ಪ್ರಸ್ತಾವನೆ:**

ಮಾಲೂರು ಪಟ್ಟಣವು ಕೋಲಾರ ಜಿಲ್ಲೆಯಲ್ಲಿ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿ ಪ್ರಕಾರ ಈ ಪಟ್ಟಣದ ಜನಸಂಖ್ಯೆ :27,791 ಆಗಿದ್ದು, 2023 ಮತ್ತು 2038ಕ್ಕೆ ನಿರೀಕ್ಷಿಸಿದ ಜನಸಂಖ್ಯೆ ಕ್ರಮವಾಗಿ 42,000 ಹಾಗೂ 55,000 ಎಂದು ಅಂದಾಜಿಸಲಾಗಿದೆ. ಪ್ರಸ್ತುತ ಈ ಪಟ್ಟಣಕ್ಕೆ ಕೊಳವೆ ಬಾವಿಗಳನ್ನು ಮೂಲವಾಗಿಟ್ಟುಕೊಡು ತಲಾ ದಿನಂಪ್ರತಿ 100 ಲೀಟರ್ ನಂತೆ ನೀರನ್ನು ಸರಬರಾಜು ಮಾಡಲಾಗುತ್ತಿದೆ., ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ.

ಪ್ರಸ್ತುತ ಪಟ್ಟಣದ ಬಹುತೇಕ ಮನೆಗಳಲ್ಲಿ ಆಳಗುಂಡಿಗಳನ್ನು ತೊಡಿ ಮನೆಯ ಹಿತ್ತಲಿನಲ್ಲಿ ತೆರದ ಗುಂಡಿಗಳ ಮೂಲಕ ಮಾನವ ತ್ಯಾಜ್ಯವನ್ನು ತ್ಯಜಿಸುತ್ತಿದ್ದು, ಕೊಳಚೆ ನೀರನ್ನು ತೆರದ ನಾಲೆಗಳ ಮೂಲಕ ಪಟ್ಟಣದ ಗಲ್ಲಿಗಳಲ್ಲಿ ಹಾಯಿಬಿಡಲಾಗುತ್ತಿದೆ. ಇದರಿಂದ ಸೊಳ್ಳೆಗಳ ಅಭಿವೃದ್ಧಿಗೆ ಕಾರಣವಾಗಿದ್ದು, ಪಟ್ಟಣದ ನೈರ್ಮಲ್ಯತೆಯ ದೃಷ್ಟಿಯಿಂದ ಒಳಚರಂಡಿ ವ್ಯವಸ್ಥೆಯ ಯೋಜನೆಯನ್ನು ಕೈಗೆತ್ತಿಕೊಳ್ಳುವುದು ಅವಶ್ಯಕವಾಗಿದೆ. ಅದರಂತೆ, ಈ ಯೋಜನೆಯನ್ನು ಮಂಡಳಿಯ 2007–08ನೇ ಸಾಲಿನ ದರಪಟ್ಟಿಯನ್ವಯ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ರೂ. 2250.00 ಲಕ್ಷಗಳಿಗೆ ಯೋಜನೆಯನ್ನು ವಿನ್ಯಾಸಿದ್ದು, ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | |
|---|---|---|
| 1 | ಹಣಕಾಸು ಸಂಸ್ಥೆಗಳಿಂದ ಸಾಲ ಶೇ 50% | ರೂ. 1125.00 ಲಕ್ಷಗಳು |
| 2 | ಕರ್ನಾಟಕ ಸರ್ಕಾರದ ಸಾಲ ಶೇ 30% | ರೂ. 675.00 ಲಕ್ಷಗಳು |
| 3 | ಪಟ್ಟಣ ಪಂಚಾಯಿತಿಯಿಂದ ಶೇ. 20% | ರೂ. 450.00 ಲಕ್ಷಗಳು |
| | ಒಟ್ಟು | ರೂ. 2250.00 ಲಕ್ಷಗಳು |

ಈ ಯೋಜನೆಯನ್ನು 2008–09ನೇ ಸಾಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕ್ರಿಯಾ ಯೋಜನೆಯಲ್ಲಿ ಸೇರಿಸಿದ್ದು ಸದರಿ ಯೋಜನೆಗೆ ರೂ. 391/– ಲಕ್ಷಗಳ ಅನುವು ಮಾಡಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 10 ಯುಡಿಎಸ್ 2009, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಾಲೂರು ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜು ರೂ. 2250.00 ಲಕ್ಷಗಳ (ರೂ. ಎರಡು ಸಾವಿರದ ಎರಡು ನೂರ ಐವತ್ತು ಲಕ್ಷ ಮಾತ್ರ) ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು "ಒಳಚರಂಡಿ ಯೋಜನೆಯಡಿ" ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) Water rates as proposed by KUWS & DB have to be implemented to meet O&M cost

2) KTPP provisions, quality control and timely completion is emphasized.

3) Escalation should be limited to a maximum of 7% of scheme In view of the size to the project, overheads as a proportion of the cost should be low.

4) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

5) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ FD 68 Exp–9:2009 ದಿನಾಂಕ:26.2.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್. 784 ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2008–09ನೇ ಸಾಲಿನ ಹೊಸ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ನೀಡಲಾದ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 11 ಅಚವಿ 2008 ದಿನಾಂಕ :15.5.08
2. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 11 ಅಚವಿ 2008, ದಿ :26.7.08.
3. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 11 ಅಚವಿ 2008, ದಿ :14.10.08.
4. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 11 ಅಚವಿ 2008, ದಿ :20.12.08.
5. ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 51 ಅಡವಿ 2008, ದಿ :21.1.09.
6 ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ದಿನಾಂಕ :3.3.2009.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ] ರಡಿಯಲ್ಲಿ ರೂ. 180.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ನಂತರ ರೂ. 50.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಅಂದರೆ ಒಟ್ಟು ರೂ. 680.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಒದಗಣೆ ಮಾಡಲಾದ ರೂ. 680.00 ಲಕ್ಷಗಳಲ್ಲಿ ಈಗಾಗಲೇ ಮೇಲೆ [1] [2], [3] ಮತ್ತು [4]ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಅನುಕ್ರಮವಾಗಿ ರೂ. 45.00 ಲಕ್ಷಗಳಂತೆ ಅಂದರೆ ಒಟ್ಟು ರೂ. 180.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.

ಮೇಲೆ [5]ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ:21.1.2009ರಲ್ಲಿ ಗುಲ್ಬರ್ಗಾ, ಬಿಜಾಪುರ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಹಾಗೂ ಹುಬ್ಬಳ್ಳಿ ಧಾರವಾಡ, ದಾವಣಗೆರೆ, ಹರಿಹರ, ಬೆಳಗಾವಿ, ಮಂಗಳೂರು, ಗುಲ್ಬರ್ಗಾ, ಶಿವಮೊಗ್ಗ, ರಾಯಚೂರು, ಮಡಿಕೇರಿ, ಚಿಕ್ಕಮಗಳೂರು ಮತ್ತು ಉಡುಪಿ ಒಟ್ಟು 12 ತಾಲ್ಲೂಕುಗಳಲ್ಲಿ National Remote Sensing Centre, ISRO, Department of Space, Govt. of India, Hyderabad ಇವರ ಮೂಲಕ ಕ್ವಿಕ್‌ಬರ್ಡ್ ಉಪಗ್ರಹದ ಮಾಹಿತಿ ಪಡೆಯಲು [procurement of Quick bird Satellite data] ರೂ. 500.00 ಲಕ್ಷಗಳ ಅನುದಾನದಲ್ಲಿ ರೂ. 250.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನ ಆಯವ್ಯಯದ ಪರಿಷ್ಕೃತ ಅಂದಾಜಿನ ಪ್ರಕಾರ ಲೆಕ್ಕ ಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ಇದರ ಅಡಿಯಲ್ಲಿ ಒದಗಿಸಲಾಗಿರುವ ಅನುದಾನವು ಕೇವಲ ರೂ. 530 ಲಕ್ಷಗಳಾಗಿವೆ.

ಮೇಲೆ [6] ರಲ್ಲಿ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರ ಪತ್ರದಲ್ಲಿ ಅನುಮೋದಿತ ಜಿಲ್ಲೆಗಳ ಒಟ್ಟಾರೆ ಭೌಗೋಳಿಕ ವಿಸ್ತೀರ್ಣವು 45760 ಚ.ಕಿ.ಮೀ ಇದ್ದು, ಇಷ್ಟು ಚದರ ಅಡಿ Quick bird Satellite data ಪಡೆಯಲು ರೂ., 350 ಲಕ್ಷಗಳು ವೆಚ್ಚವಾಗುತ್ತಿದ್ದು, ಈಗಾಗಲೇ ರೂ. 250 ಲಕ್ಷಗಳ ಬಿಡುಗಡೆ ಮಾಡಿದ್ದು, ಬಾಕಿ ಉಳಿದಿರುವ ರೂ. 100 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 51 ಅಡವಿ 2008, ಬೆಂಗಳೂರು, ದಿನಾಂಕ:5ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ, ಬಿಜಾಪುರ, ತುಮಕೂರು, ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ National Remote Sensing Centre, ISRO, Department of Space, Govt. of India, Hyderabad ಇವರ ಮೂಲಕ ಕ್ವಿಕ್‌ಬರ್ಡ್ ಉಪಗ್ರಹದ ಮಾಹಿತಿ ಪಡೆಯಲು [procurement of Quick bird Satellite data] ಬಾಕಿ ಉಳಿದಿರುವ ರೂ., 100 ಲಕ್ಷಗಳ ಅನುದಾನವನ್ನು [ರೂ. ನೂರು ಲಕ್ಷಗಳು ಮಾತ್ರ] ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 787 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಕಂಇ 90 ಎಲ್‌ಆರ್‌ಎಂ 2008, ಬೆಂಗಳೂರು, ದಿನಾಂಕ:25ನೇ ಫೆಬ್ರವರಿ 2009**

ಎ.ಸಿ.ಸಿ. ಲಿಮಿಟೆಡ್, ಮುಂಬೈ, ಇವರಿಗೆ ಚಿಕ್ಕಬಳ್ಳಾಪುರ ಜಿಲ್ಲೆ ಗೌರಿಬಿದನೂರು ತಾಲ್ಲೂಕಿನ ತೊಂಡೆಬಾವಿ ಗ್ರಾಮದ ಸರ್ವೆ ನಂ 121 ಮತ್ತು ಇತರೆಗಳಲ್ಲಿ ಒಟ್ಟು 59.27 ಎಕರೆ ಕೃಷಿ ಜಮೀನನ್ನು ಸಿಮೆಂಟ್ ಉತ್ಪಾದನಾ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಪತ್ರ ಸಂಖ್ಯೆ:ಎಲ್‌ಆರ್‌ಎಫ್ (ಕಲಂ 109) ಸಿ.ಆರ್. 06/08–09 ದಿನಾಂಕ:6.9.2008 ಹಾಗೂ ಪ್ರಾದೇಶಿಕ ಆಯುಕ್ತರ ಪತ್ರ ಸಂ:ಪ್ರಾಆಕ/ಎಲ್‌ಆರ್‌ಎಫ್/ಸಿಆರ್/24/08–09 ದಿನಾಂಕ:6.11.2008 ಗಳಲ್ಲಿ ಪ್ರಸ್ತಾಪಿತ ಮೇಲ್ಕಂಡ ಗ್ರಾಮಗಳ ಸರ್ವೆ ನಂಬರುಗಳಲ್ಲಿ ಒಟ್ಟು 59.27 ಎಕರೆ ಕೃಷಿ ಜಮೀನನ್ನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 (1)ರಡಿ ಅನುಮೋದನೆ/ವಿನಾಯಿತಿ ನೀಡುವ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್)ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ 79ಬಿ ಅಥವಾ 80 ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು

ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಎ.ಸಿ.ಸಿ. ಲಿಮಿಟೆಡ್, ಮುಂಬೈ ಇವರು ಚಿಕ್ಕಬಳ್ಳಾಪುರ, ಜಿಲ್ಲೆ ಗೌರಿಬಿದನೂರು ತಾಲ್ಲೂಕಿನ ತೊಂಡೆಬಾವಿ ಗ್ರಾಮದ ಸರ್ವೆ ನಂ., 121 ಮತ್ತು ಇತರೆಗಳಲ್ಲಿ ಒಟ್ಟು 59.27 ಎಕರೆ ಕೃಷಿ ಜಮೀನನ್ನು ಸಿಮೆಂಟ್ ಉತ್ಪಾದನಾ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ /ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3 ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5 ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6 ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7 ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳಿಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8 ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತರಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 790

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಸುಧಾರಣೆ)

## ಶಿಕ್ಷಣ ಸಚಿವಾಲಯ

**ವಿಷಯ :** ಮಾನ್ಯ ಉಚ್ಚ ನ್ಯಾಯಾಲಯ ರಿಟ್ ಅರ್ಜಿ ಸಂಖ್ಯೆ. 4884/08ರಲ್ಲಿ ದಿನಾಂಕ:28-03-2008 ರಂದು ನೀಡಿರುವ ತೀರ್ಪಿನಂತೆ ಶ್ರೀ ಸಿ.ನಾಗರಾಜು, ಕನ್ನಡ ಉಪನ್ಯಾಸಕರು ಮತ್ತು ಇತರರು, ಶ್ರೀ ಮಾರುತಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಹದಡಿ, ದಾವಣಗೆರೆ ಜಿಲ್ಲೆ ಇವರು ದಿ:05-05-08ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯನ್ನು ಇತ್ಯರ್ಥಗೊಳಿಸುವ ಬಗ್ಗೆ.

**ಓದಲಾಗಿದೆ :** 1 ಶ್ರೀ ಸಿ.ನಾಗರಾಜು, ಕನ್ನಡ ಉಪನ್ಯಾಸಕರು ಮತ್ತಿತರರು, ಶ್ರೀ ಮಾರುತಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಹದಡಿ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿ:05-05-2008ರ ಮನವಿ.

2 ಸರ್ಕಾರದ ಪತ್ರ ಸಂಖ್ಯೆ. ಇಡಿ 364 ಎಸ್‌ಒಹೆಚ್ 89,ದಿ:20-10-89.

3 ಸರ್ಕಾರದ ಪತ್ರ ಸಂಖ್ಯೆ.ಇಡಿ302ಎಸ್ಒಹೆಚ್ 90, ದಿ:09–07–9004–08–90.

4 ಸರ್ಕಾರದ ಸುತ್ತೋಲೆ ಸಂಖ್ಯೆ. ಇಡಿ 90 ಪಿಎಂಸಿ 99, ದಿ:15–10–99.

5 ಸರ್ಕಾರದ ಪತ್ರ ಸಂಖ್ಯೆ. 130 ಪಿಎಂಸಿ 99, ದಿ :12–07–01.

6 ಸರ್ಕಾರದ ಆದೇಶ ಸಂಖ್ಯೆ. ಇಡಿ 14 ಟಿಪಿಯು 01, ದಿ :14–06–02.

7 ಸರ್ಕಾರದ ಸುತ್ತೋಲೆ ಸಂಖ್ಯೆ. ಇಡಿ 90 ಪಿಎಂಸಿ ದಿ :20–09–03.

8 ಸರ್ಕಾರದ ಆದೇಶ ಸಂಖ್ಯೆ. ಇಡಿ 674 ಎಸ್ಇಡಬ್ಲ್ಯೂ 05, ದಿ :10–04–06.

9 ಸರ್ಕಾರದ ಅಧಿಸೂಚನೆ ಸಂಖ್ಯೆ. ಇಡಿ 136 ಟಿಪಿಯು 99, ದಿ:09–10–06.

**ಪ್ರಸ್ತಾವನೆ:**

1) ಮೇಲೆ ಓದಲಾದ (1) ರಲ್ಲಿನ ಮನವಿ ದಿನಾಂಕ :05–05–2008 ರಲ್ಲಿ ಶ್ರೀ ಸಿ.ನಾಗರಾಜು, ಕನ್ನಡ ಉಪನ್ಯಾಸಕರು ಮತ್ತಿತರರು, ಶ್ರೀ ಮಾರುತಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಹದಡಿ, ದಾವಣಗೆರೆ ಜಿಲ್ಲೆ, ಇವರು, ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ರಿಟ್ ಅರ್ಜಿ ಸಂಖ್ಯೆ. 4884//08 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಕೆಳಕಂಡಂತೆ ತೀರ್ಪು ನೀಡಿದೆ.

(i) the writ petition is partly allowed.

(ii) Respondents 1 and 2 are hereby directed to consider the petitioners representations dated 31-03-2007 Annexure J to the writ petition in accordance with law and as expeditiously as possible and in any event not later than three months from the date of receipt of the copy of this order.

(iii) Liberty is also reserved to the petitioners to give a fresh representation to the respondents 1 and 2 and if such a representation is given, then the respondents shall consider the same in accordance with law and as expeditiously as possible and in any event not later than three months from the date of receipt of representation.

(iv) Sri Shashidhar S.Karamadi, learned HCGP is permitted to file memo of appearance within four weeks.

(2) ಮೇಲೆ ಓದಲಾದ (2)ರ ಸರ್ಕಾರದ ಪತ್ರ ಸಂಖ್ಯೆ. ಇಡಿ 364 ಎಸ್ಒಹೆಚ್ 89, ದಿನಾಂಕ:20.10.89 ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿನ ಹುದ್ದೆಗಳ ನೇಮಕಾತಿಗಳನ್ನು ಅನುಮೋದಿಸುವ ಬಗ್ಗೆ ಕೆಳಕಂಡಂತೆ ಸ್ಪಷ್ಟೀಕರಣ ನೀಡಿರುತ್ತಾರೆ.

"ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಮಾಡಿಕೊಂಡಿರುವ ನೇಮಕಾತಿಗಳನ್ನು ಕೆಲವೊಂದು ಸಂದರ್ಭಗಳಲ್ಲಿ ನೇಮಕಾತಿ ದಿನಾಂಕದಿಂದ ಅನುಮೋದಿಸಲಾಗಿದೆ. ಅಂತಹ ನೇಮಕಾತಿಗಳಿಗೆ ಆದೇಶ ಹೊರಡಿಸಿದ ದಿನಾಂಕದಿಂದ ವೇತನವನ್ನು ನೀಡುವಂತೆಯೂ ಹಾಗೂ ಯಾವುದೇ ಹಿಂದಿನ ಬಾಕಿ ಸಂಬಳವನ್ನು ನೀಡಕೂಡದೆಂದು ಸ್ಪಷ್ಟೀಕರಣ ನೀಡಲಾಗಿದೆ. ನೇಮಕಾತಿ ದಿನಾಂಕದಿಂದ ಅನುಮೋದಿಸಿರುವ ಅವಧಿಯನ್ನು ರಜೆ, ಮುಂಗಡ, ಬಡ್ತಿ ಹಾಗೂ ನಿವೃತ್ತಿ ವೇತನಕ್ಕೆ ಮಾತ್ರ ಪರಿಗಣಿಸುವಂತೆ ತಿಳಿಸಲಾಗಿದೆ. ಅಲ್ಲದೆ ನೇಮಕಾತಿಗಳಿಗೆ ಆದೇಶಗಳನ್ನು, ಆದೇಶ ಹೊರಡಿಸುವ ದಿನಾಂಕದಿಂದ ಹೊರಡಿಸುವುದರಿಂದ ಹಿಂದೆ ನೇಮಕಾತಿ ಆಗಿದ್ದರೂ ಸಹ ಆರ್ಥಿಕ ಮಿತವ್ಯಯದ ಸಡಿಲಿಕೆಯನ್ನು ಪಡೆಯಬೇಕಾಗುತ್ತದೆ.

ಈ ಹಿಂದೆ ಯಾವುದಾದರೂ ಶಿಕ್ಷಣ ಸಂಸ್ಥೆಗಳಲ್ಲಿ ಮಾಡಿರುವ ನೇಮಕಾತಿಗಳ ಅನುಮೋದನೆಯಾಗಿ ಬಾಕಿ ವೇತನ ಬಿಡುಗಡೆ ಮಾಡಿದ್ದಲ್ಲಿ, ಆ ಬಾಕಿಯನ್ನು ಹಿಂದಕ್ಕೆ ಪಡೆಯುವಂತೆಯೂ ಹಾಗೂ ಈ ಮೇಲೆ ಹೇಳಿದ ನೇಮಕಾತಿ ನಿರ್ದೇಶನಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆಯೂ ತಿಳಿಸಲಾಗಿರುತ್ತದೆ."

3) ಸರ್ಕಾರದ ಪತ್ರ ಸಂಖ್ಯೆ. ಇಡಿ 302 ಎಸ್ಒಹೆಚ್ 90,ದಿನಾಂಕ:09–07–1990ರಲ್ಲಿ ಖಾಸಗಿ ಅನುದಾನಿತ ಸಿಬ್ಬಂದಿಯ ನೇಮಕಾತಿಗೆ ಸಂಬಂಧಿಸಿದಂತೆ ಕೆಳಕಂಡಂತೆ ನಿರ್ದೇಶನ ನೀಡಲಾಗಿದೆ.

The existing practice of approving the appointments made during the period of economy orders to have effect only from the date of order and not from the date of appointment would continue to be in force even in cases of institutions run by SC/ST's , Backward classes and minorities managements.

(4) ಮೇಲೆ ಓದಲಾದ (4)ರಲ್ಲಿನ ದಿನಾಂಕ 15.10.1990 ಸರ್ಕಾರದ ಸುತ್ತೋಲೆ ಸಂಖ್ಯೆ. ಇಡಿ 90 ಪಿಎಂಸಿ 99ರಲ್ಲಿ ಅನುದಾನಿತ ಶಾಲಾ/ಕಾಲೇಜುಗಳ ಸಿಬ್ಬಂದಿಯ ನೇಮಕಾತಿಯ ಬಗ್ಗೆ ಕೆಳಕಂಡಂತೆ ಮಾರ್ಗದರ್ಶನ ನೀಡಲಾಗಿದೆ.

"ಟಿ.ಬಿ.ಎಸ್. ನಿಯಮಗಳನ್ವಯ ಅನುದಾನರಹಿತ ಅವಧಿಯನ್ನು ರಜೆ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಪರಿಗಣಿಸಲು ಅವಕಾಶವಿರುವುದಿಲ್ಲ. ಖಾಸಗಿ ಶಾಲೆಗಳನ್ನು ಪ್ರಾರಂಭದಲ್ಲಿ ಸರ್ಕಾರವೇ ವೇತನಾನುದಾನಕ್ಕೆ ಒಳಪಡಿಸಿ, ಆದೇಶ ಹೊರಡಿಸಲಾಗುತ್ತಿದೆ. ಈ ರೀತಿ ಆದೇಶ ಹೊರಡಿಸಿ ಅಂತಹ ಶಾಲೆಯಲ್ಲಿ ಈ ಸಮಯದಲ್ಲಿ ನೇಮಕಾತಿ ಹೊಂದಿ ಸೇವೆ ಸಲ್ಲಿಸುತ್ತಿರುವ ಶಿಕ್ಷಕರ ನೇಮಕಾತಿಯನ್ನು ವೇತನಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮಾತ್ರವೇ ಅವರಿಗೆ ವೇತನವನ್ನು ನಿಗಧಿಪಡಿಸಬೇಕೆಂದು, ಅವರ ಹಿಂದಿನ ಅನುದಾನರಹಿತ ಸೇವೆಯನ್ನು ಯಾವುದೇ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲವೆಂದು ಸ್ಪಷ್ಟಪಡಿಸಲಾಗುತ್ತಿದೆ". ಆದರೆ ಶಾಲೆಯನ್ನು ವೇತನಾನುದಾನಕ್ಕೆ ಒಳಪಡಿಸಿದ ನಂತರ ನೇಮಕಾತಿ ಹೊಂದಿದ ಶಿಕ್ಷಕರ ನೇಮಕಾತಿಯನ್ನು ಅನುದಾನಸಹಿತ ಅನುಮೋದಿಸುವ ಅಧಿಕಾರವನ್ನು ಉಪ ನಿರ್ದೇಶಕರಿಗೆ ಹಲವು ಷರತ್ತುಗಳಿಗೊಳಪಟ್ಟು ಪ್ರತ್ಯಾಯೋಜಿಸಿರುವುದರಿಂದ ಅವರು ಅಂತಹ ಆದೇಶವನ್ನು ಹೊರಡಿಸಬಹುದಾಗಿದೆ. ಆದರೆ ಆ ರೀತಿ ಹೊರಡಿಸುತ್ತಿರುವ ಆದೇಶವನ್ನು ಗಮನಿಸಿದಾಗ ಅಂತಹ ಅನುಮೋದನೆಗೊಂಡ ಶಿಕ್ಷಕರ ಹಿಂದಿನ ಅನುದಾನರಹಿತ ಸೇವೆಯನ್ನು ರಜೆ ಮತ್ತು ಪಿಂಚಣಿ ಸೌಲಭ್ಯಗಳಿಗೆ ಪರಿಗಣಸಬಹುದೆಂಬ ಆದೇಶವನ್ನು ಹೊರಡಿಸುತ್ತಿರುವುದು ಕಂಡುಬಂದಿದೆ. ಇದು ಸರ್ಕಾರದ ನೀತಿಗೆ ಹಾಗೂ ಜಾರಿಯಲ್ಲಿರುವ ನಿಯಮಗಳಿಗೆ ವಿರುದ್ಧವಾಗಿರುತ್ತದೆ.

ಆದುದರಿಂದ ಶಿಕ್ಷಕರ ನೇಮಕಾತಿ ಅನುಮೋದಿಸುವ ಪ್ರಕರಣಗಳಲ್ಲಿ ಹಿಂದಿನ ಅನುದಾನರಹಿತ ಸೇವಾ ಅವಧಿಯನ್ನು ರಜೆ, ಪಿಂಚಣಿ ಮತ್ತು ಇತರೆ ಸೌಲಭ್ಯಗಳಿಗೆ ಪರಿಗಣಿಸಬಾರದೆಂದು ಹಾಗೂ ಈ ಷರತ್ತನ್ನು ನೇಮಕಾತಿ ಅನುಮೋದನೆ ಆದೇಶದಲ್ಲಿ ತಪ್ಪದೆ ಅಳವಡಿಸಿ, ಆದೇಶವನ್ನು ಹೊರಡಿಸಲು ಸಂಬಂಧಿತ ಎಲ್ಲಾ ಇಲಾಖೆ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. ಮುಂದುವರೆಸುತ್ತಾ ಸರ್ಕಾರದ ನೀತಿಗೆ ವಿರುದ್ಧವಾಗಿ ಆದೇಶವನ್ನು ಹೊರಡಿಸುವುದು ಸರ್ಕಾರದ ಗಮನಕ್ಕೆ ಬಂದಲ್ಲಿ ಸಂಬಂಧಿಸಿದ ಅಧಿಕಾರಿಗಳನ್ನು ಹೊಣೆಗಾರರನ್ನಾಗಿ ಮಾಡಿ, ಶಿಸ್ತಿನ ಕ್ರಮ ತೆಗೆದುಕೊಳ್ಳಲಾಗುವುದೆಂದು ಸೂಚಿಸಿದೆ.

(5) ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಶ್ರೀಮತಿ ರೇಣುಕ ಮತ್ತು ಇತರರು ದಾಖಲಿಸಿದ್ದ ರಿಟ್ ಅರ್ಜಿ ಸಂಖ್ಯೆ. 226–228/98 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:13.08.1998 ರಂದು ನೀಡಿರುವ ತೀರ್ಪಿನಲ್ಲಿ, ಅನುದಾನಸಹಿತ ಅನುಮೋದನೆಯಾದ ದಿನಾಂಕದಿಂದ ಭವಿಷ್ಯಾನ್ವಯವಾಗಿ ಸಲ್ಲಿಸಿರುವ ಸೇವೆಯನ್ನು ಮಾತ್ರ ಸೇವಾ ಸೌಲಭ್ಯಗಳಿಗೆ ಪರಿಗಣಸಬೇಕೆಂದು, ಅನುದಾನರಹಿತ ಅವಧಿಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಬಾರದೆಂದು ಸರ್ಕಾರವು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳನ್ನು /ಆದೇಶಗಳನ್ನು ಮಾನ್ಯ ಉಚ್ಚ ನ್ಯಾಯಾಲಯವು ಎತ್ತಿಹಿಡಿದಿದೆ. ಈ ತೀರ್ಪಿನನ್ವಯ ಈಗಾಗಲೇ ಅನುದಾನರಹಿತ ಅವಧಿಗೆ ಸೇವಾ ಸೌಲಭ್ಯಗಳನ್ನು ನೀಡಿರುವಂತಹ ಪ್ರಕರಣಗಳನ್ನು ಪುನರ್ ಪರಿಶೀಲಿಸಿ, ಸೂಕ್ತ ಕ್ರಮ ತೆಗೆದುಕೊಳ್ಳಲು ಮೇಲೆ ಓದಲಾದ (6)ರಲ್ಲಿನ ಸರ್ಕಾರದ ಆದೇಶ ಸಂಖ್ಯೆ. ಇಡಿ 221 ಟಿಪಿಯು 97, ದಿನಾಂಕ:12–07–2000ರಲ್ಲಿ ಕೆಳಕಂಡಂತೆ ಆದೇಶಿಸಿದೆ.

" In the circumstances explained in the preamble portion to this order, the request of the teachers, Lecturers of the private aided primary schools, high schools and independent composite Pre-University Colleges to allow pay fixation benefit for the period of un-aided service from the date of initial appointments in schools/colleges run by private management up to the date of approval with aid is hereby rejected.

The competent authority shall take immediate action to re fix the pay of concerned and recover excess payment made in equal monthly installments as per law".

(7) ಸರ್ಕಾರದ ಪತ್ರ ಸಂಖ್ಯೆ. ಇಡಿ 302 ಎಸ್‌ಒಹೆಚ್ 90, ದಿನಾಂಕ:09–07–1990 ಮತ್ತು ದಿನಾಂಕ:04–08–1990 ರಲ್ಲಿ ಖಾಸಗಿ ಅನುದಾನಿತ ಸಂಸ್ಥೆಗಳ ಶಾಲಾ ಕಾಲೇಜುಗಳಲ್ಲಿನ ಹುದ್ದೆಗಳನ್ನು ಅನುದಾನಸಹಿತ ಅನುಮೋದಿಸಿದ ಸರ್ಕಾರದ ಆದೇಶದ ದಿನಾಂಕದಿಂದ ಆಯಾ ಹುದ್ದೆಗಳಿಗೆ ಅನ್ವಯವಾಗುವ ವೇತನ ಶ್ರೇಣಿಯ ಕನಿಷ್ಟ ಹಂತದಲ್ಲಿ ವೇತನ ನಿಗದಿಗೊಳಿಸಬೇಕೆಂದು ಸ್ಪಷ್ಟ ನಿರ್ದೇಶನವನ್ನು ಸರ್ಕಾರವು ನೀಡಿದೆ. ಇಂತಹ ನೌಕರರು ಈ ಹಿಂದೆ ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು, ವೇತನ ನಿಗದೀಕರಣವು ಸೇರಿದಂತೆ ಕಾಲ್ಪನಿಕ ಅಥವಾ ಆರ್ಥಿಕ ಸೌಲಭ್ಯ ಅಥವಾ ಇನ್ನಾವುದೇ ಸೇವಾ ಸೌಲಭ್ಯಕ್ಕೂ ಪರಿಗಣಸಲು ಅರ್ಹತೆ ಹೊಂದಿರುವುದಿಲ್ಲ. ಈ ಅಂಶವನ್ನು ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:13.08.1998 ರಲ್ಲಿ ರಿಟ್ ಅರ್ಜಿ ಸಂಖ್ಯೆ. 226–228/98 ರ ತೀರ್ಪಿನಲ್ಲಿ ಎತ್ತಿಹಿಡಿದಿದೆ. ಈ ಬಗ್ಗೆ ಸ್ಪಷ್ಟವಾದ ಮತ್ತು ಯಾವುದೇ ಗೊಂದಲಕ್ಕೆ ಕಾರಣ ಇಲ್ಲದಂತಹ ಸೂಚನೆಗಳನ್ನು ನೀಡಿದಾಗ್ಯೂ ಸಹ ಸರ್ಕಾರದ ನೀತಿಗೆ ವಿರುದ್ಧವಾಗಿ ಖಾಸಗಿ

ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಸರ್ಕಾರದಿಂದ ಸಹಾಯಾನುದಾನಕ್ಕೆ ಒಳಪಟ್ಟ ದಿನಾಂಕದಿಂದ ಹಿಂದೆ ಸಲ್ಲಿಸಿದ ಅನುದಾನರಹಿತ ಅವಧಿಯ ಸೇವೆಯನ್ನೂ ಸಹ ಪರಿಗಣಿಸಿ, ವೇತನವನ್ನು ಕಾಲ್ಪನಿಕವಾಗಿ ಹಾಗೂ ಆರ್ಥಿಕವಾಗಿ ನಿಗದಿಗೊಳಿಸಲಾಗಿದೆ. ಹೀಗೆ ತಪ್ಪಾಗಿ ನೀಡಿದ ಮೊತ್ತವನ್ನು ಹಿಂದಕ್ಕೆ ಪಡೆಯಲು ಆದೇಶಿಸಲಾಗಿದ್ದ ದಿನಾಂಕ:12–07–2000ದ ಸರ್ಕಾರದ ಆದೇಶದಲ್ಲಿನ ಕ್ರಮವನ್ನು ಮುಂದಿನ ಆದೇಶ ಹೊರಡಿಸುವವರೆಗೆ ತಾತ್ಕಾಲಿಕವಾಗಿ ಸ್ಥಗಿತಗೊಳಿಸಬೇಕೆಂದು ಮೇಲೆ ಓದಲಾದ (8)ರ ದಿನಾಂಕ:27–02–2001ರ ಸರ್ಕಾರದ ಜ್ಞಾಪನದಲ್ಲಿ ನಿರ್ದೇಶನ ನೀಡಲಾಗಿದೆ.

(8) ಮೇಲ್ಕಂಡ ವಿಚಾರದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಗಳ ವ್ಯಾಪ್ತಿಯಲ್ಲಿ ಬರುವ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಸರ್ಕಾರದ ನೀತಿಗೆ ವ್ಯತಿರಿಕ್ತವಾಗಿ, ತಪ್ಪಾಗಿ ವೇತನ ನಿಗದೀಕರಣ ಮಾಡಿರುವ ಮತ್ತು ಇದರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ವಿವರಗಳನ್ನು ಪಡೆದು ಇದರ ಸಾಧಕಬಾದಕಗಳನ್ನು ಸರ್ಕಾರವು ಕೂಲಂಕಷವಾಗಿ ಮತ್ತೊಮ್ಮೆ ಪರಿಶೀಲಿಸಿ, ಮೇಲೆ ಓದಲಾದ '(9)ರ ದಿನಾಂಕ:14.06.2002ರ ಸರ್ಕಾರದ ಆದೇಶದಲ್ಲಿ ಕೆಳಕಂಡಂತೆ ಆದೇಶಿಸಿದೆ.

" ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರಿ ಪತ್ರ ಸಂಖ್ಯೆ. ಇಡಿ 302 ಎಸ್‌ಒಹೆಚ್ 1990, ದಿನಾಂಕ:04–08–1990 ರಲ್ಲಿ ಸರ್ಕಾರವು ವಿವರವಾದ ಹಾಗೂ ಸ್ಪಷ್ಟವಾದ ಆದೇಶವನ್ನು ನೀಡಿದಾಗ್ಯೂ ಇದನ್ನು ಉಲ್ಲಂಘಿಸಿ, ಸರ್ಕಾರದ ನೀತಿಗೆ ವ್ಯತಿರಿಕ್ತವಾಗಿ ದಿನಾಂಕ:04.08.1990 ರಂದು ಹಾಗೂ ತದನಂತರ ಅನುದಾನಸಹಿತ ಅನುಮೋದನೆ ನೀಡಿದ ಪ್ರಕರಣಗಳಲ್ಲಿ ಖಾಸಗಿ ಅನುದಾನಿತ ಸಂಸ್ಥೆಗಳ ಸಿಬ್ಬಂದಿಯ ಹಿಂದಿನ ಅನುದಾನರಹಿತವಾಗಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕಾಲ್ಪನಿಕವಾಗಿ ಅಥವಾ ಆರ್ಥಿಕವಾಗಿ ವೇತನ ನಿಗಧಿಪಡಿಸಿ, ಆರ್ಥಿಕ ಸೌಲಭ್ಯ ನೀಡಿರುವ ಎಲ್ಲಾ ಪ್ರಕರಣಗಳನ್ನು ಸಕ್ಷಮ ಪ್ರಾಧಿಕಾರಗಳು ಸಂಬಂಧಿತ ಸಿಬ್ಬಂದಿಯ ವೇತನವನ್ನು ದಿನಾಂಕ:04–08–1990ರ ಆದೇಶದನ್ವಯ ಪುನರ್ ನಿಗದಿಪಡಿಸತಕ್ಕದ್ದು, ಹಾಗೂ ಈ ರೀತಿ ತಪ್ಪಾಗಿ ನೀಡಿದ ಹೆಚ್ಚುವರಿ ಅನಧಿಕೃತ ವೇತನದ ಮೊತ್ತವನ್ನು ಕಾನೂನು ರೀತ್ಯಾ ಸೂಕ್ತ ಕಂತುಗಳಲ್ಲಿ ವಾಪಾಸ್ಸು ಪಡೆಯಲು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು ಎಂದು ಆದೇಶಿಸಿದೆ".

(9) ಕರ್ನಾಟಕ ರಾಜ್ಯ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳ ಮತ್ತು ನೌಕರರ ಸಂಘಟನೆಗಳ ಹೋರಾಟ ಸಮನ್ವಯ ಸಮಿತಿಯ ಅಧ್ಯಕ್ಷರು ಹಾಗೂ ಇತರೆ ಪದಾಧಿಕಾರಿಗಳೊಂದಿಗೆ ದಿನಾಂಕ:23–08–2002 ರಂದು ಉನ್ನತ ಶಿಕ್ಷಣ ಸಚಿವರ ಮತ್ತು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ದಿನಾಂಕ:14.06.2002ರ ಸರ್ಕಾರದ ಆದೇಶವನ್ನು ಹಿಂತೆಗೆದುಕೊಂಡು ಈ ಬೇಡಿಕೆಯ ಬಗ್ಗೆ ಸಹಾನುಭೂತಿಯಿಂದ ಪರಿಶೀಲಿಸಬೇಕೆಂದು ತೀರ್ಮಾನಿಸಿದ್ದರಿಂದ, ಹಾಗೂ ಸರ್ಕಾರ ಈ ವಿಷಯವನ್ನು ಪುನರ್ ಪರಿಶೀಲಿಸಿ, ಒಂದು ಅಂತಿಮ ನಿರ್ಧಾರವನ್ನು ತೆಗೆದುಕೊಳ್ಳುವವರೆಗೆ ದಿನಾಂಕ:14–06–2002ರ ಆದೇಶದಂತೆ ಕ್ರಮ ತೆಗೆದುಕೊಳ್ಳುವುದನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಬೇಕೆಂದು ವಿಧಾನ ಮಂಡಲದ ಉಭಯ ಸದನಗಳಲ್ಲಿ ಮಾನ್ಯ ಸದಸ್ಯರು ಸರ್ಕಾರವನ್ನು ಒತ್ತಾಯಿಸಿದ್ದರಿಂದ ಮತ್ತು ದಿನಾಂಕ:20–03–2003 ರಂದು ಮಾನ್ಯ ವಿಧಾನ ಪರಿಷತ್ತಿನ ಸದಸ್ಯರುಗಳೊಂದಿಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ನಡೆಸಿದ ಸಭೆಯಲ್ಲಿ ಮೇಲ್ಕಂಡ ಆದೇಶವನ್ನು ತಾತ್ಕಾಲಿಕವಾಗಿ ಹಿಂಪಡೆಯಲು ಒತ್ತಾಯಿಸಿದ್ದರಿಂದ, ಮೇಲೆ ಓದಲಾದ (10)ರ ದಿನಾಂಕ: 21.03.2003ರ ಸರ್ಕಾರದ ಆದೇಶದಲ್ಲಿ ದಿನಾಂಕ:14.06.2002ರ ಸರ್ಕಾರದ ಆದೇಶದಂತೆ ಕ್ರಮ ತೆಗೆದುಕೊಳ್ಳಬಾರದೆಂದು ಆದೇಶಿಸಲಾಗಿದೆ.

(10) ಸಾಂದರ್ಭಿಕವಾಗಿ ಹೇಳುವುದಾದರೆ, ಮೇಲೆ ಓದಲಾದ (11)ರ ಸರ್ಕಾರದ ಆದೇಶ ಸಂಖ್ಯೆ.ಇಡಿ 674 ಎಸ್‌ಇಡಬ್ಲ್ಯೂ 2005, ದಿನಾಂಕ:10–04–2006ರಲ್ಲಿ ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಯು ಅನುದಾನರಹಿತವಾಗಿ ಸಲ್ಲಿಸಿದ ಸೇವಾವಧಿಯ ಬಗ್ಗೆ ಕೆಳಕಂಡಂತೆ ಸ್ಪಷ್ಟಪಡಿಸಿದೆ.

(i) ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಯವರು ಅನುದಾನರಹಿತವಾಗಿ ಸಲ್ಲಿಸಿದ ಸೇವಾವಧಿಯ ಬಗ್ಗೆ ದಿನಾಂಕ:24–08–63ರ ಸರ್ಕಾರದ ಆದೇಶ ಸಂಖ್ಯೆ.65 ಎಸ್‌ಇಎಸ್ 62 ರಲ್ಲಿ ಒಳಗೊಂಡ ಟ್ರಿಪಲ್ ಬೆನಿಫಿಟ್ ಸ್ಕೀಂ ನ ನಿಯಮಗಳ ನಿಯಮ 52(ಎ) ಕೆಳಕಂಡಂತಿದೆ.

" 52(a) In computing the length of qualifying service all previous service whether temporary, officiating, or permanent, either in one or in more than one state aided institutions shall be taken in to account.

(ii) ಈ ನಿಯಮದನ್ವಯ ಅನುದಾನರಹಿತ ಸೇವೆಯನ್ನು ಪರಿಗಣಸಲು ಆಸ್ಪದವಿಲ್ಲ.

(iii) ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಖಾಸಗಿ ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಂಸ್ಥೆಗಳ ನೌಕರರ ನೇಮಕಾತಿ, ಸೇವಾ ಷರತ್ತು ಮತ್ತು ನಿಬಂಧನೆಗಳು) ನಿಯಮಗಳು 1999ರ ಅನುಬಂಧ–2(ನಿಯಮ–3(1)) ಕೆಳಕಂಡಂತಿದೆ.

" Benefits not available for service rendered during the un aided period for purpose fixation of pay, leave and pension or any other service benefits by the Government.

(iv) ಇವುಗಳ ಪ್ರಕಾರ ಅನುದಾನರಹಿತ ಸೇವೆಯನ್ನು ವೇತನ ನಿಗದಿ, ರಜೆ, ನಿವೃತ್ತಿ ವೇತನ ಇತ್ಯಾದಿ ಸೌಲಭ್ಯಗಳಿಗಾಗಿ ಪರಿಗಣಸಲು ಅವಕಾಶವಿರುವುದಿಲ್ಲ. ಆದ್ದರಿಂದ "ಹಿಂದಿನ ಸೇವೆಯನ್ನು ರಜೆ ಮತ್ತು ನಿವೃತ್ತಿ ವೇತನಕ್ಕೆ ಮಾತ್ರ ಪರಿಗಣಸತಕ್ಕದ್ದು" ಎಂದು ಕಾಲಕಾಲಕ್ಕೆ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಸಹಾಯಾನುದಾನಕ್ಕೆ ಒಳಪಡಿಸುವ ವಿವಿಧ ಸರ್ಕಾರಿ ಆದೇಶಗಳನ್ವಯ ನಮೂದಾಗಿರುವುದನ್ನು ಹಿಂದಕ್ಕೆ ಪಡೆದು ಅದರ ಬದಲಿಗೆ " ಹಿಂದಿನ ಅನುದಾನರಹಿತ ಸೇವೆಯನ್ನು ರಜೆ, ನಿವೃತ್ತಿ ವೇತನ ಮತ್ತು ಇತರೆ ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಸತಕ್ಕದ್ದಲ್ಲ" ಎಂದು ಮಾರ್ಪಡಿಸಿ ಆದೇಶಿಸಲಾಗಿರುತ್ತದೆ.

(11) ಅಲ್ಲದೆ, ಮೇಲೆ ಓದಲಾದ (12)ರ ಸರ್ಕಾರದ ಅಧಿಸೂಚನೆ ಸಂಖ್ಯೆ. ಇಡಿ 136 ಟಿಪಿಯು 99, ದಿನಾಂಕ:09.10.2006ರ ನಿಯಮ 21 (2)(3) ರಲ್ಲಿ ಅನುದಾನರಹಿತ ಅವಧಿಯ ಬಗ್ಗೆ ಸ್ಪಷ್ಟಪಡಿಸಿರುವ ಉದ್ಧೃತ ಭಾಗ ಕೆಳಕಂಡಂತಿದೆ.

(2) The posts and the persons working in such posts in Private Aided Pre-University Colleges shall be eligible for grant in aid only from the date of sanction of the grant in aid by the Government and the earlier period of un aided service shall not count for any pay fixation, increment, leave, seniority and other service benefits including pension.

(3) Consequent to the sanction of salary grant- in-aid to an employee of aided Pre-University College, the initial pay of such an employee shall be fixed at the minimum of pay scale applicable to the post and he will not be eligible for any monitory benefit either notionally or otherwise in respect of earlier period of un -aided service.

12. ಕಾಲ್ಪನಿಕ ವೇತನ ಬಡ್ತಿಯ ನಿಗಧಿಯ ಬಗ್ಗೆ ಮಾನ್ಯ ವಿಧಾನ ಪರಿಷತ್ ಸದಸ್ಯರೊಡನೆ ಮತ್ತು ರಾಜ್ಯ ಅನುದಾನಿತ ಶಿಕ್ಷಣ ಸಂಸ್ಥೆಗಳ ಪದಾಧಿಕಾರಿಗಳೊಂದಿಗೆ ಹಾಗೂ ಖಾಸಗಿ ಅನುದಾನಿತ ನೌಕರರ ಸಂಘದ ಪಧಾದಿಕಾರಿಗಳೊಡನೆ ಚರ್ಚಿಸಿದಂತೆ ಮತ್ತೊಮ್ಮೆ ಆರ್ಥಿಕ ಇಲಾಖೆಯನ್ನು ಸಮಾಲೋಚಿಸಿದಾಗ, ಆರ್ಥಿಕ ಇಲಾಖೆಯು ನೀಡಿದ ಅಭಿಪ್ರಾಯ ಕೆಳಕಂಡಂತಿರುತ್ತದೆ.

FD 948 EXP-8/2007 ED102 SES 2002 Finance Dept. (Exp-8)07 Dated 13.12.2007

" The matter was discussed in the meeting chaired by Principal Secretary, Finance Department on 16-11-07 wherein Secretary, Education Department (P & S Education) and Secretary (Expenditure) were present Secretary, ED informed that the bone of contention is whether policy relating to counting service for the purpose of Pension, Pay and Seniority should be applicable to the cases prior to 4/08/1990 or not. There is an argument that this principle should not be applied for the cases prior to 04-08-1990 as clarification was issued only on 04-08-1990. This issue was discussed in the light of rule position and policy of the Government relating to Grant-in-Aid, economy orders that were in force in relevant point of time etc. TBS rules are very specific and as per this service rendered in an Aided Institution will only qualify for pension. The instructions dated 04.08.1990 has been issued in the background of relaxation of economy orders permitting filling up of specified number of vacancies. This only reiterates the policy existed at that time and no new policy has been declared. When economy orders were in force prior to 04-08-1990, no authority other than Government was competent to approve any appointment with aid. To argue that instructions dated 04-08-1990 is not applicable to earlier cases has no basis and it amounts to regularizing the appointments, which were against the policy of Government.

Policy of Government with regard to counting service only from the date of approval with aid for all the service benefits has been consistent and letter dated 04-08-1990 only clarifies this position.

Accordingly after detailed discussion, it was agreed that there is no justification for changing the policy of the Government and service rendered in an unaided institution cannot be reckoned for seniority, pension and pay fixation.

Hence, the Administrative Department is informed to drop the proposal".

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸದರಿಯವರಿಗೆ ಕಾಲ್ಪನಿಕ ವೇತನ ಬಡ್ತಿಯನ್ನು ನೀಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. ಆದ್ದರಿಂದ ಅರ್ಜಿದಾರರ ಕೋರಿಕೆಯನ್ನು ಪರಿಗಣಸಲು ಅವಕಾಶವಿಲ್ಲವೆಂದು ತಿಳಿಸಿ, ಕೆಳಕಂಡಂತೆ ಆದೇಶ ಹೊರಡಿಸಲು ಉದ್ದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ಇಡಿ 201 ಎಸ್‌ಒಹೆಚ್ 2008,ಬೆಂಗಳೂರು, ದಿನಾಂಕ 26ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ, ಮಾನ್ಯ ಉಚ್ಚ ನ್ಯಾಯಾಲಯ ರಿಟ್ ಅರ್ಜಿ ಸಂಖ್ಯೆ. 4884/08 ರಲ್ಲಿ ದಿನಾಂಕ:28–03–2008 ರಂದು ನೀಡಿರುವ ತೀರ್ಪಿನಂತೆ, ಶ್ರೀ ಸಿ.ನಾಗರಾಜು, ಕನ್ನಡ ಉಪನ್ಯಾಸಕರು ಹಾಗೂ ಮತ್ತಿತರರು ಶ್ರೀ ಮಾರುತಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಹದಡಿ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ:05–05–2008ರ ಮನವಿಗಳನ್ನು ಆದ್ಯಂತವಾಗಿ ಪರಿಶೀಲಿಸಿದ ನಂತರ ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪ್ರಭುಸ್ವಾಮಿ**

ಪಿ.ಆರ್. 735

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರೌಢ)

ಶಿಕ್ಷಣ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2007–08ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತಿಗೆ ಬಿಡುಗಡೆಯಾಗಿದ್ದ ರಾಜ್ಯದ ಪಾಲಿನ ಅನುದಾನದ ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರ ಪತ್ರ ಸಂಖ್ಯೆ :ಆರ್ 20015/48/2006 ಡಿಆರ್‌ಡಿಎ (ಎಸ್ ಆರ್ ನಂ. 10) ದಿನಾಂಕ :2.4.2007 ಮತ್ತು (ಎಸ್ ಆರ್ ನಂ. 42) ದಿನಾಂಕ :30.5.2007
2. ಕೇಂದ್ರ ಸರ್ಕಾರ ಪತ್ರ ಸಂಖ್ಯೆ :ಆರ್ 17014/10/2007 ಡಿಆರ್‌ಡಿಎ (ಎಸ್ ನಂ. 107) ದಿನಾಂಕ :19.12.2007, (ಎಸ್ ನಂ. 143) ದಿನಾಂಕ :8.1.2008 ಮತ್ತು (ಎಸ್ ನಂ. 260) ದಿನಾಂಕ :30.3.3008.
3. ರಾಜ್ಯ ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 6 ಎಸ್ ಜೆವೈ (ಡಿಆರ್‌ಡಿಎ) 2007, ಬೆಂಗಳೂರು ದಿನಾಂಕ :18.5.2007, 10–8–2007, 21–1–2008, 11–2–2008 ಮತ್ತು 24–3–2008.
4. ಕೇಂದ್ರ ಸರ್ಕಾರ ಪತ್ರ ಸಂಖ್ಯೆ :ಆರ್17014/10/2008–09 ಡಿಆರ್‌ಡಿಎ (ಎಸ್ ಎಲ್ ನಂ. 141) ದಿನಾಂಕ :9.1.2009.
5. ಮುಕಾನಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ ಜಿಪಗು/ಮುಲೆಅ/ಡಿಆರ್ ಡಿಎ/2008–09/1219 ದಿನಾಂಕ :7–2–2009.
6. ಮುಕಾನಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂಖ್ಯೆ ಜಿಪಂಕೋ/ಮುಲೆಅ/ಸ್ಕೀಂ/ಡಿಆರ್ ಡಿಎ/2008–09 ದಿನಾಂಕ :3.2.2009.

**ಪ್ರಸ್ತಾವನೆ:**

2007–08ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರವು ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಗುಲ್ಬರ್ಗಾ ಜಿಲ್ಲೆಗೆ ರೂ. 42,78,000 ಹಾಗೂ ಕೊಪ್ಪಳ ಜಿಲ್ಲಾ ಪಂಚಾಯಿಗೆ ರೂ. 43,56,000 ಬಿಡುಗಡೆ ಮಾಡಿದ್ದು, ಇದರನ್ವಯ ರಾಜ್ಯ ಸರ್ಕಾರ ಕೊಪ್ಪಳ ಜಿಲ್ಲಾ ಪಂಚಾಯತಿಗೆ ರೂ. 14,52,000 ಹಾಗೂ ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ರೂ. 14,59,000 ಬಿಡುಗಡೆ ಮಾಡಬೇಕಿತ್ತು. ಆದರೆ ರಾಜ್ಯದ ಆಯವ್ಯಯದಲ್ಲಿ ಕೊಪ್ಪಳ ಜಿಲ್ಲೆಗೆ ಅನುದಾನದ ಕೊರತೆಯ ಕಾರಣ ಓದಲಾಗಿದೆ(3)ರ ಆದೇಶದಲ್ಲಿ ರೂ. 14,52,000 ಬದಲು ರೂ. 9.71.000 ಮಾತ್ರ ಬಿಡುಗಡೆ ಮಾಡಲಾಗಿತ್ತು.

ಇದಲ್ಲದೆ, ರಾಜ್ಯ ಸರ್ಕಾರ ಓದಲಾಗಿದೆ (3)ರ ದಿನಾಂಕ:24.3.2008 ರ ಆದೇಶದಲ್ಲಿ ರಾಜ್ಯದ ಕೆಲವು ಜಿಲ್ಲಾ ಪಂಚಾಯಿತಿಗಳಲ್ಲಿ 2007–08ನೇ ಸಾಲಿನ ವೇತನ ವಿತರಿಸಲು ತೊಂದರೆಯಾದ ಕಾರಣ, ಇದೊಂದು ವಿಶೇಷ ಪ್ರಕರಣವೆಂದು

ಭಾವಿಸಿ, ರಾಜ್ಯದ ಆಯವ್ಯಯದಲ್ಲಿ ಆಯಾಯಾ ಜಿಲ್ಲೆಗಳಲ್ಲಿ ಉಳಿದಿದ್ದ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆಗೊಳಿಸಲಾಗಿತ್ತು. ಇದರಂತೆ ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ರೂ. 11,12,000 ಬಿಡುಗಡೆ ಮಾಡಲಾಗಿತ್ತು. ಆದರೆ ಸರ್ಕಾರದ ಆದೇಶ ಜಿಲ್ಲೆಗೆ ಸಕಾಲದಲ್ಲಿ ತಲುಪದ ಕಾರಣ ಖಜಾನೆಯಿಂದ ಅನುದಾನ ಸೆಳೆಯಲು ಸಾಧ್ಯವಾಗಿರುವುದಿಲ್ಲವೆಂದು ಓದಲಾಗಿದೆ (5)ರಲ್ಲಿ ಗುಲ್ಬರ್ಗಾ ಜಿಲ್ಲಾ ಪಂಚಾಯತ್ ತಿಳಿಸಿದೆ. ಇದರಿಂದಾಗಿ ಗುಲ್ಬರ್ಗಾ ಜಿಲ್ಲಾ ಪಂಚಾಯತಿ 2007–08ರ ಸಾಲಿನಲ್ಲಿ ರೂ. 10,13,000 ಮಾತ್ರ ಸೆಳೆಯಲಾಗಿದ್ದು, ರೂ. 4,46,000 ಕೊರೆಗೆ ಉಂಟಾಗಿದೆ. ಕೊಪ್ಪಳ ಮತ್ತು ಗುಲ್ಬರ್ಗಾ ಜಿಲ್ಲೆಗೆ ಕೇಂದ್ರ ಸರ್ಕಾರದ ಬಿಡುಗಡೆ ಮಾಡಿದ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ಸದರಿ ಜಿಲ್ಲೆಗಳಿಗೆ ಕಡಿಮೆ ಬಿಡುಗಡೆಗೊಳಿಸಿದ್ದಕ್ಕಾಗಿ ಓದಲಾಗಿದೆ (4)ರಲ್ಲಿ ಕೇಂದ್ರ ಸರ್ಕಾರ ಕೊಪ್ಪಳ ಜಿಲ್ಲೆಗೆ ರೂ. 19,35, 000 ಮತ್ತು ಗುಲ್ಬರ್ಗಾ ಜಿಲ್ಲೆಗೆ ಎರಡನೇ ಕಂತಿನ ಅನುದಾನ ರೂ. 13,39, 000 ಗಳನ್ನು ಕಡಿತಗೊಳಿಸಿ ಬಿಡುಗಡೆ ಮಾಡಿರುತ್ತದೆ.

ಕೇಂದ್ರ ಸರ್ಕಾರದಿಂದ ಜಿಲ್ಲೆಗಳಿಗೆ ಕಡಿತಗೊಳಿಸಿದ ಅನುದಾನವನ್ನು ಪುನಃ ಪಡೆಯುವ ಸಲುವಾಗಿ ಕೊಪ್ಪಳ ಜಿಲ್ಲೆಗೆ ರೂ. 4,81,000 ಹಾಗೂ ಗುಲ್ಬರ್ಗಾ ಜಿಲ್ಲೆಗೆ ಕೊರತೆಯಾಗಿರುವ ರೂ. 4,46,000 ಲಕ್ಷಗಳನ್ನು ಒಳಗೊಂಡಂತೆ ಒಟ್ಟು ರೂ. 11,12,000 ವನ್ನು 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಈ ಎರಡು ಜಿಲ್ಲೆಗಳಿಗೆ ಒಟ್ಟು ರೂ. 15,93,000 ಬಿಡುಗಡೆಗೊಳಿಸಬೇಕಾಗಿದೆ ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 6 ಎಸ್‌ಜೆವೈಡಿಆರ್‌ಡಿಎ 2007, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ 2009**

ರಾಜ್ಯ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತಿಗಳಿಗೆ 2007–08ನೇ ಸಾಲಿನಲ್ಲಿ ನೀಡಬೇಕಿದ್ದ ಅನುದಾನವನ್ನು 2008–09ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ಜಿಲ್ಲೆಗಳಿಗೆ ಒದಗಿಸಿರುವ ಅನುದಾನದಿಂದ ಒಟ್ಟು ರೂ. 15,93,000ಗಳನ್ನು (ರೂ. ಹದಿನೈದು ಲಕ್ಷದ ತ್ತೊಂಬತ್ತಮೂರು ಸಾವಿರ ಮಾತ್ರ) ಈ ಕೆಳಕಂಡಂತೆ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ರಾಜ್ಯ ಸರ್ಕಾರವು 2008–09ನೇ ಸಾಲಿನ ಆಯವ್ಯಯದಿಂದ ಪ್ರಸ್ತಾವನೆಯಲ್ಲಿ ವಿವರಿಸಿದಂತೆಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|
| 1 | ಗುಲ್ಬರ್ಗಾ | 417 | 3200ZZ0003 | 11,12,000 |
| 2 | ಕೊಪ್ಪಳ | 466 | 1500 ZZ0010 | 4,81,000 |
| | | | ಒಟ್ಟು ರೂ | 15,93,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ:"2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196– ಜಿಲ್ಲಾ ಪಂಚಾಯತ್ ಗಳಿಗೆ ಸಹಾಯ –6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ (ಕೇಂದ್ರ ಪುರಸ್ಕೃತ ಯೋಜನೆ) 2008–2009(2515–00–196–6–06)" ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ:8.9.2004 ಮತ್ತು 14.7.2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವ ಉಕಾ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತ್‌ಗಳ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು (ಸ್ವ ಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 51 ಪಿಬಿಎಸ್ 2008 ದಿನಾಂಕ:21.2.2009 ಮತ್ತು ಗ್ರಾಅಪ 73 ಪಿಬಿಎಸ್ 2008 ದಿನಾಂಕ:26.2.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ : ಶಮ್ಲಾ ಇಕ್ಬಾಲ್**

ಪಿ.ಆರ್. 791

ನಿರ್ದೇಶಕರು [ಸ್ವ ಉಕಾ] ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಇಂಡಿಯಾ ಸೆಮಿ ಕಂಡಕ್ಟರ್ ಅಸೋಸಿಯೇಷನ್ [ಐಎಸ್‌ಎ] ಬೆಂಗಳೂರು ಇವರಿಗೆ "ಐಎಸ್‌ಎ ವಿಜನ್ ಸಮಿಟ್ 2009" ಕಾರ್ಯಕ್ರಮವನ್ನು ನಡೆಸಲು ಆರ್ಥಿಕ ನೆರವು ನೀಡುವ ಬಗ್ಗೆ–ಆದೇಶ

**ಓದಲಾಗಿದೆ :** ಅಧ್ಯಕ್ಷರು, ಇಂಡಿಯಾ ಸೆಮಿ ಕಂಡಕ್ಟರ್ ಅಸೋಸಿಯೇಷನ್ [ಐಎಸ್‌ಎ] ರವರ ಪತ್ರಗಳ ದಿನಾಂಕ :30.10.2008, 20.,2.2009 ಹಾಗೂ 27.2.2009.

**ಪ್ರಸ್ತಾವನೆ:**

ಮೇಲೆ ಓದಲಾದ ಅಧ್ಯಕ್ಷರು, ಇಂಡಿಯಾ ಸೆಮಿ ಕಂಡಕ್ಟರ್ ಅಸೋಸಿಯೇಷನ್ [ಐಎಸ್‌ಎ]ರವರ ಪತ್ರದಲ್ಲಿ ಸದರಿ ಸಂಸ್ಥೆಯು "ಐಎಸ್‌ಎ ವಿಜನ್ ಸಮಿಟ್ 2009" ಕಾರ್ಯಕ್ರಮವನ್ನು ದಿನಾಂಕ 16 ಮತ್ತು 17ನೇ ಫೆಬ್ರವರಿ 2009ರಂದು ಹೊಟೇಲ್ ಲೀಲಾ ಪ್ಯಾಲೇಸ್ ಬೆಂಗಳೂರಿನಲ್ಲಿ ನಡೆಸಿದ್ದು, ಸದರಿ ಸಮಿಟ್‌ಗಾಗಿ ಹೋಸ್ಟ್ ಸ್ಟೇಟ್ ಸ್ಪಾನ್ಸರ್‌ಷಿಪ್ ಆಗಿ ಸ್ಪಾನ್ಸರ್‌ಷಿಪ್ ಬಾಬ್ತು ರೂ. 8,00,000/– + ಸೇವಾ ತೆರಿಗೆ ಬಾಬ್ತು ರೂ. 98,880/– ಆಗಿರುತ್ತದೆಂದು ತಿಳಿಸುತ್ತದೆ, ಸದರಿ ಹಣವನ್ನು "ಐಎಸ್‌ಎ ವಿಜನ್ ಸಮಿಟ್ 2009" ಹೆಸರಿನಲ್ಲಿ ಬಿಡುಗಡೆ ಮಾಡಬೇಕೆಂದು ಕೋರಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 16 ಇತರೆ 2009, ಬೆಂಗಳೂರು, ದಿನಾಂಕ:12ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಇಂಡಿಯಾ ಸೆಮಿ ಕಂಡಕ್ಟರ್ ಅಸೋಸಿಯೇಷನ್ [ಐಎಸ್‌ಎ] ಬೆಂಗಳೂರು ಇವರಿಗೆ ದಿನಾಂಕ:16 ಮತ್ತು 17ನೇ ಫೆಬ್ರವರಿ 2009ರಂದು ಹೊಟೇಲ್ ಲೀಲಾ ಪ್ಯಾಲೇಸ್ ಬೆಂಗಳೂರಿನಲ್ಲಿ ನಡೆದ "ಐಎಸ್‌ಎ ವಿಜನ್ ಸಮಿಟ್ 2009" ಕಾರ್ಯಕ್ರಮಕ್ಕಾಗಿ ಹೋಸ್ಟ್ ಸ್ಟೇಟ್ ಸ್ಪಾನ್ಸರ್ ಷಿಪ್ ಬಾಬ್ತು [ರೂ. 8,00,000/– + ಸೇವಾ ತೆರಿಗೆ ಬಾಬ್ತು ರೂ. 98,880/–] ರೂ. 8,98,880/–ಗಳ ಅನುದಾನವನ್ನು (ರೂ ಎಂಟು ಲಕ್ಷದ ತೊಂಬತ್ತೆಂಟು ಸಾವಿರದ ಎಂಟನೂರ ಎಂಬತ್ತು ರೂಪಾಯಿಗಳು ಮಾತ್ರ) ಅನುದಾನವನ್ನು ಇಂಡಿಯಾ ಸೆಮಿ ಕಂಡಕ್ಟರ್ ಅಸೋಸಿಯೇಷನ್ [ಐಎಸ್‌ಎ] ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರಿಗೆ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "3451–00=090–2–01 ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ –059–ಇತರೆ ಖರ್ಚು (ಯೋಜನೆ" ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಇಂಡಿಯಾ ಸೆಮಿ ಕಂಡಕ್ಟರ್ ಅಸೋಸಿಯೇಷನ್ [ಐಎಸ್‌ಎ] ಬೆಂಗಳೂರು ಇವರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29 ವೆಚ್ಚ–2/2009, ದಿನಾಂಕ:17.2.2009ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 879

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ